# ಅನನ್ಯ
# ಅಭಿವ್ಯಕ್ತಿ

ಸಂಪುಟ- 1 ಸಂಚಿಕೆ- 8 ಮಾರ್ಚ್ - 1999



## ಈ ಸಂಚಿಕೆಯಲ್ಲಿ

## ಅರಿಕೆ

1999ರ ಅನನ್ಯ ಕ್ಯಾಲೆಂಡರ್ ಅನಾವರಣ ಸಮಾರಂಭವು ರಾಜ್ಯದ ನಾನಾ ಭಾಗಗಳಲ್ಲಿ ನಡೆದು, ಕ್ಯಾಲೆಂಡರ್ ಮೂಲಕ ನಮ್ಮ ಪರಂಪರಾ ಸಂಸ್ಕೃತಿಯನ್ನು ಆಸಕ್ತರಿಗೆ ತಲುಪುವಂತೆ ಮಾಡುವಲ್ಲಿ ಅನನ್ಯವು ಸಫಲವಾಗಿದೆ ಎಂದೇ ಹೇಳಬಹುದು. ಆಯಾ ಊರಿನ ಸಂಸ್ಥೆಗಳನ್ನು ಜೊತೆಗೂಡಿಸಿಕೊಂಡು ನಡೆಸಿದ ಈ ಕಾರ್ಯಕ್ರಮವು ವಿಶಿಷ್ಟ ಅನುಭವವನ್ನು ತಂದಿತು. 'ಕ್ಯಾಲೆಂಡರ್ ಅನಾವರಣ' ಸಮಾರಂಭದಲ್ಲಿ ವಿಶೇಷ ಉತ್ಸಾಹದಿಂದ ಸಕ್ರಿಯವಾಗಿ ಪಾಲ್ಗೊಂಡು ಸಹಕಾರವನ್ನು ನೀಡಿದ ಶಿವಮೊಗ್ಗೆಯ 'ನಾದಸುಧಾ', 'ಶ್ರೋತೃ', 'ಕೀರ್ತಿಶೇಷ ಬಿ. ದೊರೈಸ್ವಾಮಿ ಅಯ್ಯಂಗಾರ್ ಟ್ರಸ್ಟ್', 'ಶ್ರೀ ಗುರುಗುಹ ಗಾನಸಭಾ' ಹಾಗೆಯೇ ಹುಬ್ಬಳ್ಳಿಯ 'ಹಾನಗಲ್ ಮ್ಯೂಸಿಕ್ ಫೌಂಡೇಶನ್', ಕಾರ್ಕಳದ 'ಶಾಸ್ತ್ರೀಯ ಸಂಗೀತ ಸಭಾ' ಈ ಎಲ್ಲ ಸಂಗೀತ ಸಭೆಯ ಮುಖ್ಯಸ್ಥರು ಮತ್ತು ಕಾರ್ಯಕಾರೀ ಸಮಿತಿಗೆ ಅನನ್ಯದ ಹೃತ್ಪೂರ್ವಕವಾದ ಅಭಿವಂದನೆಗಳು. ಅನನ್ಯವು ಬೆಂಗಳೂರು ನಗರದಿಂದಾಚೆಗೆ ಕಾರ್ಯಕ್ರಮವನ್ನು ನಡೆಸಿತು ಎನ್ನುವುದಕ್ಕಿಂತಲೂ, ಈ ಎಲ್ಲ ಪ್ರತಿಷ್ಠಿತ ಸಂಸ್ಥೆಗಳು ಬೆಂಗಳೂರಿನ ಕಿರಿಯ ಸಂಸ್ಥೆಯೊಂದನ್ನು ಬರಮಾಡಿಕೊಂಡು ಸಾಂಸ್ಕೃತಿಕ ಸೇತುವೆಯನ್ನು ನಿರ್ಮಿಸಿ ತಮ್ಮ ಹೃದಯ ವೈಶಾಲ್ಯವನ್ನು ಪ್ರದರ್ಶಿಸಿದವು. ಇಂತಹ ಸಂಗೀತ ಸಂಸ್ಥೆಗಳ ಮೂಲಕ ವಿವಿಧ ಕೋನಗಳಿಂದ ವಿದ್ವಾಂಸರು ಮತ್ತು ಪ್ರತಿಭಾವಂತರು ಅನನ್ಯದ ವೇದಿಕೆಗೆ ಬರುವಂತಾದರೆ ನಮ್ಮ ಪ್ರಯತ್ನ ಸಾರ್ಥಕ.

ನಾಣ್ಣುಡಿಯೊಂದು ಹೀಗೆ ಹೇಳುತ್ತದೆ - ''ಹಣ್ಣು ಸಿಕ್ಕರೆ ಹಂಚಿ ತಿನ್ನು, ಹೂವು ಸಿಕ್ಕರೆ ಕೊಟ್ಟು ಮುಡಿ''. ಸಂಗೀತವನ್ನೂ ಇದರೊಂದಿಗೆ ಸೇರಿಸಬಹುದು. ಕಲೆ ಕಲಾವಿದ, ಸಾಹಿತ್ಯ ಮುಂತಾದವು ದೇಶ ಮತ್ತು ಸಮಾಜಕ್ಕೆ ಗೌರವ ತರುವ ಆಸ್ತಿ. ಇವೆಲ್ಲವೂ ಆಸಕ್ತರಿಗೆ ದೊರೆಯುವಂತಾದರೆ ಹೇಗಿರುತ್ತದೆ? ಈ ನಿಟ್ಟಿನಲ್ಲಿ ಅನನ್ಯವು ಒಂದು ಯೋಜನೆಯನ್ನು ಕೈಗೊಂಡಿದೆ. ಲಭ್ಯವಿರುವ ಎಲ್ಲಾ ಹಿರಿಯ ಕಲಾವಿದರ, ವಿವಿಧ ಪ್ರಕಾರಗಳ ಸಂಗೀತವನ್ನು ಸಂಗ್ರಹಿಸಿ, ಗ್ರಂಥಾಲಯದ ಮಾದರಿಯಲ್ಲಿ ಎಲ್ಲರಿಗೂ ಒಂದೆಡೆ ಸಿಗುವಂತೆ ಮಾಡುವುದು. ಈ ವಿಷಯವನ್ನು ಸಮಾನ ಮನಸ್ಕರೊಂದಿಗೆ ಚರ್ಚಿಸಿದಾಗ ಬಹಳ ಉತ್ತೇಜನಕರ ಪ್ರತಿಕ್ರಿಯೆ ಬಂದಿದೆಯಲ್ಲದೆ ಸಂಗೀತಗಾರರ ವಂಶಸ್ಥರು ತಮ್ಮ ಹಿರಿಯರ ಬಗ್ಗೆ ಇರುವ ಮಾಹಿತಿ ಹಾಗೂ ಸಂಗೀತ ಸಂಗ್ರಹವನ್ನು ಕೊಡಲು ಮುಂದಾಗಿದ್ದಾರೆ. ನಮ್ಮ ವಿನಂತಿ ಇಷ್ಟೆ, ನಿಮ್ಮಲ್ಲಿ ಬೇರೆಯವರೊಂದಿಗೆ ಹಂಚಿಕೊಳ್ಳುವಂತಹ ಸಂಗ್ರಹಗಳಿದ್ದಲ್ಲಿ ದಯಮಾಡಿ 'ಅನನ್ಯ' ಸಂಸ್ಥೆಗೆ ನೀಡುವುದಾದಲ್ಲಿ ನಿಮ್ಮ ಹೆಸರಿನಲ್ಲಿ ಜತನದಿಂದ ಕಾಯ್ದು ಬೇರೆಯವರಿಗೆ ಉಣಬಡಿಸುವ ಕೈಂಕರ್ಯ ನಾವು ಕೈಗೊಳ್ಳುತ್ತೇವೆ. ಇದಕ್ಕೆ ಸಂಬಂಧಿಸಿದ ಖರ್ಚು- ವೆಚ್ಚಗಳನ್ನು ಅನನ್ಯವು ಭರಿಸುತ್ತದೆ. ನೀವು ಅನನ್ಯದ ಒಂದು ಭಾಗವಾಗುತ್ತೀರಿ. ನಮಗೆ ಈ ಕುರಿತು ವಿಷಯ ತಿಳಿಸಿದಲ್ಲಿ ನಿಮ್ಮನ್ನು ಸಂಪರ್ಕಿಸುವ ಜವಾಬ್ದಾರಿ ನಮ್ಮದು.

ಇದರೊಂದಿಗೆ, ದಾಖಲಿಸಬೇಕಾಗಿರುವ ಸಂಗೀತ, ಸಾಹಿತ್ಯ, ಕಲೆಗೆ ಸಂಬಂಧಿಸಿದ ಸಂಗ್ರಹವನ್ನು ಪುಸ್ತಕರೂಪದಲ್ಲಿ ಪ್ರಕಟಿಸುವ ಯೋಜನೆಯನ್ನೂ ಕೈಗೆತ್ತಿಕೊಂಡಿದ್ದೇವೆ. ವೀಣಾ ಪದ್ಮನಾಭಯ್ಯನವರ ಕೃತಿಗಳು ಹಾಗೂ ಮೈಸೂರು ವಾಸುದೇವಾಚಾರ್ಯರ ''ನಾ ಕಂಡ ಕಲಾವಿದರು'' ಪುಸ್ತಕದ ಇಂಗ್ಲೀಷ್ ಅವತರಣಿಕೆಗಳು ಮುದ್ರಿತವಾಗುತ್ತಿವೆ.

ಅನನ್ಯವು ತನ್ನ ವ್ಯಾಪ್ತಿಯನ್ನು ವಿಸ್ತರಿಸುವ ಸಲುವಾಗಿ ಮಲ್ಲೇಶ್ವರದ 94/1, 16ನೇ ಅಡ್ಡರಸ್ತೆ, ವೆಸ್ಟ್ ಪಾರ್ಕ್ ರಸ್ತೆಯಲ್ಲಿ ತನ್ನ ಕಾರ್ಯಾಲಯವನ್ನು ಪ್ರಾರಂಭಿಸಿದೆ. ಇಲ್ಲಿಯ ದೂರವಾಣಿ : 3440409. ವಿದ್ವಾನ್ ಕದ್ರಿ ಗೋಪಾಲನಾಥ್‌ರವರಲ್ಲಿ ಸ್ಯಾಕ್ಸೋಫೋನ್ ಅಭ್ಯಸಿಸುತ್ತಿರುವ ಶ್ರೀ ಶ್ರೀಧರ್ ನಾಯ್ದುರವರು ಅನನ್ಯದ ಮೇಲಿನ ಅಭಿಮಾನದಿಂದ ಈ ಕಾರ್ಯದಲ್ಲಿ ನೆರವಾಗುತ್ತಿದ್ದಾರೆ. ಕಾರ್ಯಾಲಯವು ಬೆಳಿಗ್ಗೆ 9 ರಿಂದ ಮಧ್ಯಾಹ್ನ 1 ಘಂಟೆಯವರೆಗೆ ಹಾಗೂ 1.30 ರಿಂದ ಸಂಜೆ 5.30ರವರೆಗೆ ತೆರೆದಿರುತ್ತದೆ. ಅನನ್ಯಕ್ಕೆ ಸಂಬಂಧಿಸಿದ ಯಾವುದೇ ವಿಷಯದ ಬಗ್ಗೆ ಕಾರ್ಯಾಲಯವನ್ನು ಸಂಪರ್ಕಿಸಬಹುದು. ಎಂದಿನಂತೆ ಸಂಗೀತ ಕಾರ್ಯಕ್ರಮಗಳು ಅನನ್ಯ ಸಭಾಂಗಣದಲ್ಲೇ ನೆರವೇರುತ್ತವೆ.

ನಮ್ಮ ಈ ಎಲ್ಲ ಯೋಜನೆಗಳಿಗೆ ಸಹೃದಯರ ಪ್ರೋತ್ಸಾಹವನ್ನು ಅನನ್ಯವು ಬಯಸುತ್ತದೆ.

**ಮುಖಪುಟದ ಚಿತ್ರ :** ಶ್ರೀ ಪುರಂದರ ದಾಸರು-ಗಂಜೀಫಾ ರಘುಪತಿ ಭಟ್. ಕೃಪೆ: ಸಂಗೀತ ಸಭಾ, ಉಡುಪಿ

# ಶೇಷಣ್ಣನವರು
## (ವೆಂಕಟಪ್ಪನವರ ನೆನಪುಗಳು)



ಪ್ರೊ॥ ಸಾ.ಕೃ. ರಾಮಚಂದ್ರರಾವ್

ಕಲಾವಿದ ಕೆ. ವೆಂಕಟಪ್ಪನವರು ವೈಣಿಕ ಶಿಖಾಮಣಿ ಶೇಷಣ್ಣನವರ ಬಳಿ ಹಲವು ವರ್ಷಗಳ ಕಾಲ ವೀಣೆಯನ್ನು ಕಲಿತಿದ್ದರು. ಅವರು ಶೇಷಣ್ಣನವರನ್ನು ಹತ್ತಿರದಿಂದ ಬಲ್ಲವರು, ಅವರೊಂದಿಗೆ ಒಡನಾಡಿದವರು. ಅವರ ವಿಚಾರವಾಗಿ ಭಕ್ತಿಯನ್ನು ಬೆಳೆಸಿಕೊಂಡಿದ್ದವರು. ವೆಂಕಟಪ್ಪನವರು ತಮ್ಮ ಗುರುಗಳನ್ನು ಕುರಿತಂತೆ ನನಗೆ ಆಗಾಗ ವಿವರಗಳನ್ನೂ ಪ್ರಸಂಗಗಳನ್ನೂ ಕತೆಗಳನ್ನೂ ಹೇಳುತ್ತಲೆ ಇದ್ದರು. ಅವನ್ನೆಲ್ಲ ನಾನು ಬರೆದಿಟ್ಟುಕೊಳ್ಳುತ್ತಿದ್ದೆ. ಕೆಲವನ್ನು ಇಲ್ಲಿ ಕಾಣಿಸಿದ್ದೇನೆ.

(1) ಶೇಷಣ್ಣನವರು ಚಿಕ್ಕಂದಿನಲ್ಲಿ ಸುಬ್ಬಣ್ಣನವರ ತಂದೆ ದೊಡ್ಡಶೇಷಣ್ಣ ಎಂಬುವರ ಬಳಿ ವೀಣೆಯನ್ನು ಕಲಿಯುತ್ತಿದ್ದರು. ದೊಡ್ಡಶೇಷಣ್ಣ ಆಗಿನ ಮೈಸೂರು ಅರಸರ ಆಸ್ಥಾನದಲ್ಲಿ ಹಿರಿಯ ವಿದ್ವಾಂಸರು. ಅವರ ಬಳಿ ಹುಡುಗ ಶೇಷಣ್ಣ ಅಭ್ಯಾಸ ಮಾಡುವಾಗ ಮುಂಜಾನೆ ಮೂರು ಗಂಟೆಗೇ ಏಳುವನು. ಆರರವರೆಗೆ ಅಭ್ಯಾಸ ಮಾಡಿಕೊಂಡು ದೊಡ್ಡಶೇಷಣ್ಣನವರ ಮನೆಗೆ ಹೋಗುವನು. ಅಲ್ಲಿ ಹಿಂದಿನ ಪಾಠವನ್ನು ಒಪ್ಪಿಸಿದ ಮೇಲೇ ಮುಂದಿನ ಪಾಠ. ಗುರುಗಳನ್ನು ಮೆಚ್ಚಿಸುವುದು ತುಂಬ ಕಷ್ಟ. ಎಷ್ಟೋ ಕಷ್ಟಪಟ್ಟು ಅಭ್ಯಾಸಮಾಡಿಕೊಂಡಿದ್ದನ್ನು ಒಪ್ಪಿಸಿದರೆ ಗುರುಗಳು ''ಸಾಧಕ ಸಾಲದು'' ಎಂದು ಬಿಡುವರು ! ಶೇಷಣ್ಣ ಅದೇ ಪಾಠವನ್ನು ಮತ್ತೆ ಅಭ್ಯಾಸ ಮಾಡಬೇಕು. ಒಂದೇ ಪಾಠ ಕೆಲವು ತಿಂಗಳುಗಳಾದರೂ ಆಯಿತು ! ಹೀಗೆ ಹಠಸಾಧನೆ.

ಒಮ್ಮೆ ವಿರಿಬೋಣಿ ವರ್ಣವನ್ನು ಕಲಿಯುತ್ತಿದ್ದರು. ಹೀಗೆ ಎಷ್ಟೋ ಬಾರಿ 'ಸಾಧಕ ಸಾಲದು' ಎಂಬ ಪಲ್ಲವಿ ಆದ ಮೇಲೆ ಒಂದು ದಿನ ಶೇಷಣ್ಣನಿಗೆ ಸ್ವಲ್ಪ ಬೇಸರವೆ ಆಯಿತು. ಅದೇನೋ ಅಂದಿನ ದುಗುಡ, ''ಇನ್ನು ಹೇಗೆ ಬಾರಿಸಬೇಕು?'' ಎಂದು ಕೇಳಿಯೇ ಬಿಟ್ಟ! ಗುರುಗಳಿಗೆ ಸಿಟ್ಟು ಬರಲಿಲ್ಲ ''ಓಹೋ, ಹಾಗೋ? ಪೆಠಾರಿಯಿಂದ ವೀಣೆಯನ್ನು ತೆಗೆದುಕೊಂಡು ಬಾ, ತೋರಿಸುತ್ತೇನೆ'' ಎಂದರು. ಶೇಷಣ್ಣ ವೀಣೆಯನ್ನು ತಂದುಕೊಟ್ಟ. ಗುರುಗಳು ಶ್ರುತಿಮಾಡಿಕೊಂಡು ನುಡಿಸತೊಡಗಿದರು. ನಾದ ಒಂದು ಫರ್ಲಾಂಗಿನವರೆಗೆ ಕೇಳುತ್ತಿದ್ದಿತಂತೆ. ಆ ನುಡಿಸಾಣಿಕೆಯ ವೈಭವವನ್ನು ಕಂಡು ಶೇಷಣ್ಣ ಗಳಗಳ ಅತ್ತುಬಿಟ್ಟ. ಗುರುಗಳ ಕಾಲಿಗೆ ಬಿದ್ದು ತಾನು ದುಡುಕಿ ನುಡಿದಿದ್ದನ್ನು ಮನ್ನಿಸುವಂತೆ ಬೇಡಿಕೊಂಡ. ಗುರುಗಳ ಸಾಧಕದ ರುಚಿಯನ್ನು ಕಂಡುಕೊಂಡ.

(2) ಶೇಷಣ್ಣನವರು ಅಭ್ಯಾಸಕ್ಕೆ ತುಂಬ ಬೆಲೆಕೊಟ್ಟಿದ್ದವರು. ವಿಖ್ಯಾತರಾದ ವೈಣಿಕರಾದ ಮೇಲೆ ಕೂಡ ದಿನವೂ ಮುಂಜಾನೆ ಆರು ವರ್ಣಗಳು, ಇಪ್ಪತ್ತೈದು ಕೀರ್ತನೆಗಳು, ಎರಡು ಪಲ್ಲವಿಗಳು ಅಭ್ಯಾಸ ಮಾಡುತ್ತಿದ್ದರು. ಏನಾದರೂ ಕೆಲಸ ಬಿದ್ದು, ಮೈಯಲ್ಲಿ ನೆಮ್ಮದಿ ಕೆಟ್ಟು, ಒಂದು ದಿನ ಅಭ್ಯಾಸ ಮಾಡಲಾರದೆ ಹೋದರೆ, ಮರುದಿನ ಇರಸುಮುರುಸು; ನುಡಿಸಾಣಿಕೆ ಅಷ್ಟು ಸಲೀಸಾಗಿ ಬರುತ್ತಿರಲಿಲ್ಲ. ''ನೆನ್ನೆ ನಾನು ವಾದ್ಯ ಮುಟ್ಟಲಿಲ್ಲ, ಇವತ್ತು ನನ್ನ ಮಾತು ಅದು ಕೇಳುತ್ತಿಲ್ಲ'' ಎಂದು ಗೊಣಗುತ್ತ ಕೈ ಕುದುರಿಸಿಕೊಳ್ಳುವರು. ಒಂದೆರಡು ಗಂಟೆ ನುಡಿಸಿದ ಮೇಲೆ ''ಈಗ ಹತೋಟಿಗೆ ಬಂತು'' ಎಂದು ನಿಟ್ಟುಸಿರು ಬಿಡುವರು. ಅವರಿಗೆ ಎಪ್ಪತ್ತುನಾಲ್ಕು ವರ್ಷಗಳಾದ ಮೇಲೆ ಕೂಡ ಅವರು ''ಅಯ್ಯೋ, ಇನ್ನೂ ಈ ವಾದ್ಯದ ಆಳ ನನಗೆ ತಿಳಿಯಲಿಲ್ಲವಲ್ಲಾ?'' ಎಂದು ಪೇಚಾಡಿಕೊಳ್ಳುವರು.

(3) ವೃದ್ಧಾಪ್ಯದಲ್ಲಿ ಅವರ ದಿನಚರಿಯು ಹೀಗಿದ್ದಿತಂತೆ. ಬೆಳಗು ಏಳು ಗಂಟೆಗೆ ಮೊದಲು

ಏಳುವರು. ನಿತ್ಯವಿಧಿಗಳನ್ನು ತೀರಿಸಿ, ಮನೆಯ ಹೊರಗೆ ಜಗುಲಿಯ ಮೇಲೆ ಬಂದು ಕೂಡುವರು. ಯಾರಾದರೂ ಬರುವರು, ಮಾತನಾಡುವರು. ಸ್ವಲ್ಪ ಹೊತ್ತಾದ ಮೇಲೆ ಎದ್ದು ಒಳಗೆ ಬರುವರು; ಒಂದು ಲೋಟ ಬಿಸಿಬಿಸಿ ಕಾಫಿ ಕುಡಿದು ಸ್ನಾನದ ಮನೆಗೆ ಹೊರಡುವರು. ಸ್ನಾನವಾದ ಮೇಲೆ ಆಹ್ನಿಕ, ದೇವರ ಪೂಜೆ. ಇದು ಎರಡು ಗಂಟೆಗಳ ಕಾಲ ನಡೆಯುವುದು. ಒಂಬತ್ತೂವರೆ ಗಂಟೆಗೆ ಸರಿಯಾಗಿ ಮಹಡಿ ಹತ್ತಿ ಹೋಗುವರು. ಅಲ್ಲಿ ವೀಣೆಯ ಪಾಠ ವಿದ್ಯಾರ್ಥಿಗಳಿಗೆ. ಹನ್ನೆರಡು ಗಂಟೆಯವರೆಗೂ ಪಾಠವೇ! ಅನಂತರ ಕೆಳಗಿಳಿದು ಬಂದು ಊಟಕ್ಕೆ ಕೂಡುವರು. ಅವರ ಊಟ ತುಂಬ ಸರಳವಾದದ್ದು. ಅನ್ನ, ಸಾರು, ಚಟ್ನಿ, ಪಲ್ಯ ಇಷ್ಟಿದ್ದರಾಯಿತು. ಮೊಸರೆಂದರೆ ಅವರಿಗೆ ಪ್ರೀತಿ. ಊಟಕ್ಕೆ ಧಾರಾಳವಾಗಿ ಮೊಸರು ಇರಬೇಕು. ಅವರು ಬೇರೆ ಏನನ್ನೂ ಬಯಸುತ್ತಿರಲಿಲ್ಲ. ಊಟವಾದ ಮೇಲೆ, ಮಧ್ಯಾಹ್ನದ ವಿಶ್ರಾಂತಿ. ಸಂಜೆ ಆರುಗಂಟೆಗೆ ಮನೆಯಿಂದ ಹೊರಟು ಕೆಲವು ಮಿತ್ರರ ಮನೆಗೆ ಹೋಗಿ, ಅರಮನೆ ತಲುಪುವರು. ಅಲ್ಲಿ ವೀಣೆಯ ಪಾಠ ಮುಗಿಸಿ ಮನೆಗೆ ಹಿಂದಿರುಗುವರು.

ಮನೆಗೆ ಬಂದ ಮೇಲೆ, ಮಹಡಿಯ ಮೇಲೆ ನೆರೆದ ಸ್ನೇಹಿತರೊಡನೆ, ಶಿಷ್ಯರೊಡನೆ ಸರಸವಾಗಿ ಮಾತುಕತೆ. ದಿನವೂ ಇಪ್ಪತ್ತು-ಇಪ್ಪತ್ತೈದು ಮಂದಿಯಾದರೂ ಅವರ ಮನೆಯಲ್ಲಿ ಸೇರುವರು. ಅವರ ಜೊತೆ ಮಾತುಕತೆ ನಡೆಯುತ್ತಿರುವಾಗಲೆ, ನಡುವೆ ವೀಣೆಯನ್ನು ನುಡಿಸುವರು. ಯಾರು ಏನನ್ನು ಕೇಳಿದರೂ ನುಡಿಸುವರು. ತಮಗೆ ಅಭ್ಯಾಸವೂ ಆಯಿತು, ನೆರೆದವರಿಗೆ ಮನರಂಜನೆಯೂ ಆಯಿತು. ರಾತ್ರಿ ಒಂಬತ್ತು ಗಂಟೆಗೆ ಅರಮನೆಯಿಂದ ಗುಂಡು ಹಾರಿಸುವ ವೇಳೆಗೆ ಈ ಸಂತೋಷಕೂಟ ಮುಗಿಯುತ್ತಿದ್ದಿತು; ಬಂದವರು ತಮ್ಮ ತಮ್ಮ ಮನೆಗಳಿಗೆ ಹಿಂದಿರುಗುವರು. ಶೇಷಣ್ಣನವರು ಆಗ ಮಹಡಿಯಿಂದ ಕೆಳಗಿಳಿದು ಬಂದು ಊಟ ಮಾಡಿ, ಸ್ವಲ್ಪ ಹೊತ್ತು ಅಡ್ಡಾಡಿ ಮಲಗಿಬಿಡುವರು.

(4) ಒಂದು ಸಂಜೆ ಮಹಾರಾಜಾ ಕಾಲೇಜಿನ ಹಾಸ್ಟೆಲಿನಲ್ಲಿ ಹಿಂದೂಸ್ಥಾನೀ ಗಾಯಕರೊಬ್ಬರ ಕಚೇರಿ. ಶೇಷಣ್ಣನವರು ತಮ್ಮ ಸ್ನೇಹಿತರು ಬೆಳವಾಡಿ ದಾಸಪ್ಪನವರ ಜೊತೆಗೂಡಿ ಕಚೇರಿಗೆ ಬಂದಿದ್ದರು. ಬೆಳವಾಡಿ ದಾಸಪ್ಪನವರೇ ಈ ಕಚೇರಿಯನ್ನು ಏರ್ಪಡಿಸಿದ್ದರು. ಕಚೇರಿ ಮುಗಿದಮೇಲೆ, ಮನೆಗೆ ಹಿಂದಿರುಗುವಾಗ ದಾಸಪ್ಪನವರು ಶೇಷಣ್ಣನವರ ಅಭಿಪ್ರಾಯ ಏನೆಂದು ಕೇಳಿದರು. ''ಶಾರೀರ ದಿವಿನಾಗಿದೆ, ದಾಸಪ್ಪ'' ಎಂದು ಶೇಷಣ್ಣನವರು ಹೇಳಿ ಸುಮ್ಮನಾದರು. ದಾಸಪ್ಪ ಅಷ್ಟಕ್ಕೆ ಬಿಡಲಿಲ್ಲ. ಅವರ ಸಂಗೀತದ ಬಗ್ಗೆ ಹೇಳಿರೆಂದು ಬಲವಂತ ಮಾಡಿದರು. ಶೇಷಣ್ಣನವರು, ''ಒಂದು ಕತೆ ನೆನಪಿಗೆ ಬರುತ್ತದೆ, ದಾಸಪ್ಪ. ಅದನ್ನು ಆಮೇಲೆ ಹೇಳುತ್ತೇನೆ. ಅಕ್ಷರ ಚೆನ್ನಾಗಿದ್ದರೆ ಅರ್ಥವೂ ಚೆನ್ನಾಗಿರುತ್ತದೆಯೆ, ದಾಸಪ್ಪ? ಕಚೇರಿಯ ತುಂಬ ಅಪಸ್ವರಗಳೇ!'' ಎಂದು ಹೇಳಿಬಿಟ್ಟರು.

ಆಮೇಲೆ ಅವರು ಹೇಳಿದ ಕತೆ. ಒಂದೂರಿನಲ್ಲಿ ಒಂದು ಅರಳಿಮರ. ಎಲ್ಲಿಂದಲೋ ಒಂದು ಬ್ರಹ್ಮರಾಕ್ಷಸ ಬಂದು ಅದರಲ್ಲಿ ಸೇರಿಕೊಂಡ. ಊರವರಿಗೆ ಬಾಧೆ ಆರಂಭವಾಯಿತು. ಮುದುಕರಿಗೆ ಕಾಲು ಬಿದ್ದು ಹೋಗುವುದು, ಗರ್ಭಿಣಿಯರಿಗೆ ಗರ್ಭ ನಿಂತುಹೋಗುವುದು, ಹೀಗೆ ಒಂದಲ್ಲ ಒಂದು ಉಪದ್ರವ. ಊರವರು ಅದನ್ನು ಓಡಿಸಲು ಏನೇನೋ ಮಾಡಿದರು. ಏನೂ ಪ್ರಯೋಜನವಾಗಲಿಲ್ಲ. ಈ ಸಮಯದಲ್ಲೊಮ್ಮೆ ಆ ಊರಿಗೆ ಒಬ್ಬರು ದಾಸರು ಬಂದರು. ಊರ ಮುಂದಿನ ಅರಳೀಮರದ ಕೆಳಗೇ ಕೂತು ಹಾಡತೊಡಗಿದರು. ಬ್ರಹ್ಮರಾಕ್ಷಸ ದಿಗ್ಗನೆ ಅವರೆದುರು ಹಾರಿಬಂದು ನಿಂತು ''ಅಯ್ಯೋ ಮಹಾರಾಯ, ಕೇಳಲಾರೆ!'' ಎಂದು ಕಿವಿ ಮುಚ್ಚಿಕೊಂಡ. ದಾಸರಿಗೆ ಸ್ವಲ್ಪ ದಿಗಿಲಾಯಿತು, ಆದರೂ ತನ್ನ ಹಾಡನ್ನು ಇವ ಮೆಚ್ಚಿಕೊಳ್ಳುತ್ತಿದ್ದಾನೆಂದು ಬಗೆದು ಇನ್ನಷ್ಟು ಗಟ್ಟಿಯಾಗಿ ಹಾಡತೊಡಗಿದರು. ಬ್ರಹ್ಮರಾಕ್ಷಸ ಅದನ್ನು ಕೇಳಲಾರದೆ ಅಲ್ಲಿಂದ ಓಡಿಹೋದ. ಊರವರಿಗೇನೋ ನೆಮ್ಮದಿಯಾಯಿತು. ದಾಸರನ್ನು ಊರಲ್ಲೇ ಇರಿಸಿಕೊಂಡರು; ಅವರಿಗೆ ಮನೆ-ಮಠ ಕಟ್ಟಿಸಿಕೊಟ್ಟರು. ಅವರ ಯೋಗಕ್ಷೇಮವನ್ನು ನೋಡಿಕೊಂಡರು. ಬ್ರಹ್ಮರಾಕ್ಷಸನೇನೋ ಹೋದ, ಆದರೆ ಅಪಸ್ವರ ಉಳಿದುಕೊಂಡಿತು!

(5) ಶೇಷಣ್ಣನವರ ವೀಣೆ ಸಣ್ಣ ಪ್ರಮಾಣದ್ದು. ಬೇರೆ ಯಾರಾದರೂ ಅದನ್ನು ನುಡಿಸಿದರೆ ನಾದವೇ ಹೊರಡುತ್ತಿರಲಿಲ್ಲವಂತೆ; ಅಪಸ್ವರವೂ ಹೊರಹೊಮ್ಮಿ ಕೇಳಲಾಗುತ್ತಿರಲಿಲ್ಲವಂತೆ. ಆದರೆ ಅವರೇ

ನುಡಿಸಲು ತೊಡಗಿದರೆ ಆ ನಾದಮಾಧುರ್ಯಕ್ಕೆ, ಗುಂಫನಕ್ಕೆ ಎಲ್ಲರೂ ತಲೆದೂಗುತ್ತಿದ್ದರಂತೆ. ವಾದ್ಯಕ್ಕಿಂತ ಅವರ ಬೆರಳುಗಳ ಶಕ್ತಿ ಅವರ ಸಂಗೀತವನ್ನು ಮೆರೆಯಿಸುತ್ತಿದ್ದುದು. ''ವೀಣೆಯ ಬಲವೆಲ್ಲ ಬಲಗೈಯಲ್ಲಿ'' ಎಂದು ಅವರು ಹೇಳುತ್ತಿದ್ದರಂತೆ. ''ವಾದ್ಯ ಚೆನ್ನಾಗಿದ್ದರೆ ಮನೋಧರ್ಮವೂ ಹೆಚ್ಚುತ್ತದೆ'' ಎಂದೂ ಹೇಳುತ್ತಿದ್ದರಂತೆ.

(6) ಸಂಜೆಯ ವೇಳೆ ಮನೆಯಲ್ಲಿ ನೆರೆದವರಿಗಾಗಿ ವೀಣೆ ನುಡಿಸುತ್ತಿರುವಾಗ ಒಮ್ಮೊಮ್ಮೆ ಅಪೂರ್ವವಾದ, ವಿನೂತನವಾದ, ರಮಣೀಯವಾದ ಸಂಗತಿಗಳು ಹೊರಹೊಮ್ಮುತ್ತಿದ್ದುವು. ಆಗ ಅವರೇ ಆಶ್ಚರ್ಯಪಟ್ಟು 'ಆಹಾ !', 'ಅಯ್ಯೋ !' ಎಂದು ಉದ್ಗಾರ ತೆಗೆಯುತ್ತಿದ್ದರು. ಮುಂದೆ ಕೂತವರೊಂದಿಗೆ ''ಅದು ತಾನೇ ಬರಬೇಕು, ನಾನು ಬಾರೆಂದರೆ ಬರುತ್ತದೆಯೆ?'' ಎಂದು ಹೇಳುವರು. ವೀಣೆಯ ಯೋಗ್ಯತೆಯೆಷ್ಟೆಂದು ತಿಳಿದುಕೊಂಡರೆ ವೈಣಿಕನಿಗೆ ವಿನಯ ಸಹಜವಾಗುತ್ತದೆ ಎಂದೂ, ವೀಣೆಯ ಸಾಮರ್ಥ್ಯದೆದುರು ವೈಣಿಕನ ಸಾಮರ್ಥ್ಯ ಎಷ್ಟರಮಟ್ಟಿನದು? ಎಂದೂ ಅವರು ಮತ್ತೆ ಮತ್ತೆ ನುಡಿಯುತ್ತಿದ್ದರಂತೆ.

ಅವರ ಪಾಲಿಗೆ ವೀಣೆಯು ಬರಿಯ ಒಂದು ವಾದ್ಯವಲ್ಲ; ಸಾಕ್ಷಾದ್ದೇವತೆ. ಅದಕ್ಕೆ ತಮ್ಮನ್ನು ತಾವು ಒಪ್ಪಿಸಿಕೊಂಡರೆ ಮಾತ್ರ ವಾದ್ಯವು ತನ್ನ ಗುಟ್ಟನ್ನು ಬಿಟ್ಟುಕೊಟ್ಟೀತು ಎಂದು ದೃಢವಾಗಿ ನಂಬಿದ್ದವರು ಅವರು. ವೀಣೆಯನ್ನು ತನಗೆ ಬೇಕಾದಂತೆ ತನ್ನ ಮರ್ಜಿಗೆ ತಿರುಗಿಸಿಕೊಳ್ಳಬೇಕೆಂಬ, ವೀಣೆಯ ಮೇಲೆ ತನ್ನ ಒಡೆತನವನ್ನು ಸಾಧಿಸಿಕೊಳ್ಳಬೇಕೆಂಬ ಎದೆಗಾರಿಕೆಯಾಗಲಿ ಚಪಲವಾಗಲಿ ಅವರಿಗೆಂದೂ ಇರಲಿಲ್ಲ. ವೀಣೆಯನ್ನು ಕಂಡರೆ ಅವರಿಗೆ ದಿಟವಾದ ಗೌರವ, ಭಕ್ತಿ. ಹಾಗೆಂದೇ ವೀಣೆ ಅವರಿಗೆ ಒಲಿದದ್ದು. ■

---

## ಶ್ರೀಮತಿ ಗಂಗೂಬಾಯಿ ಹಾನಗಲ್ ಅವರಿಂದ ಅನನ್ಯ ಕ್ಯಾಲೆಂಡರ್-1999 ಅನಾವರಣ, ಹುಬ್ಬಳ್ಳಿ



# ಬೃಹದ್ದೇಶೀ

ಟಿ.ಎಸ್. ಸತ್ಯವತಿ



'ಅಂಶ'ವೇ ಜಾತಿಯ ಸರ್ವಸ್ವ, ಜೀವಾಳ. ಸರಿಯಾಗಿ ಗಮನಿಸಿದರೆ ಗ್ರಹ, ತಾರ, ಮಂದ್ರ ಮುಂತಾದವುಗಳೆಲ್ಲ 'ಅಂಶ'ದ ಬೇರೆ ಬೇರೆ ರೂಪಗಳಷ್ಟೆ!

ಯಾವುದರಿಂದ ರಾಗಾಭಿವ್ಯಕ್ತಿಯಾಗುವುದೋ ಅದು ಅಂಶ. (''यस्मिन्नंशो क्रियमाणे रागाभिव्यक्तिर्भक्ति सोऽशः'': ಯಾವುದರಿಂದ ಗೀತವು ಆರಂಭವಾಗುವುದೋ ಅದೂ ಅಂಶವೇ. (''यस्मादारभ्य गीतः प्रवर्तते ।... सोऽशः...।'') ಅಂಶ ಸ್ವರದಿಂದಾರಂಭಿಸಿ ಐದು ಸ್ವರಗಳ ನಂತರ ಇರುವುದು ತಾರಗತಿ. ''अंश स्वरादारभ्य पञ्चस्वर परा तारगतिः ।'' ನಾಲ್ಕು ಸ್ವರಗಳ ನಂತರ 'ತಾರ' ಎನ್ನುವ ಮತವೂ ಇದೆ. ಹಾಗೆಯೇ ಸಪ್ತಸ್ವರಗಳ ಬಳಿಕ ತಾರಸ್ಥಾಯಿ ಎಂಬ ಅಭಿಪ್ರಾಯವೂ ಇರುವುದು ಕಂಡುಬರುತ್ತದೆ. ''चतुस्वरमारोहणं तार इति ।... सप्तस्वरस्यापि तारता भवति ।'' (ಈಗ ನಾವು ಅನುಸರಿಸುತ್ತಿರುವುದು ಸಪ್ತಸ್ವರಸ್ಥಾಯಿ ಕ್ರಮವೇ ಆಗಿದೆ). ಕೆಲವೊಮ್ಮೆ ಆರು ಸ್ವರಗಳ ಆರೋಹಣದ ನಂತರವೂ 'ತಾರ'ವಿದೆ. ಉದಾಹರಣೆಗೆ 'ಗಾಂಧಾರಿ'ಯಲ್ಲಿ ಗಾಂಧಾರದಿಂದಾರಂಭಿಸಿ ಆರೋಹಣ ಕ್ರಮದಲ್ಲಿ ಮುಂದುವರಿದರೆ 'ಷಡ್ಜ'ವು 'ತಾರ'ವಾಗುತ್ತದೆ. (''कदाचित् षष्ठस्वरारोहणमपि तारः । तथा गान्धार्याः षड्जस्तारः ।''). ಹೀಗೆ, ತಾರಮಂದ್ರಗಳನ್ನು ನಿರ್ಣಯಿಸುವ ಸ್ವರವೂ ಅಂಶವೇ ! (''यथा तारनियामकमन्द्रनियामकस्वरोऽप्यंशः)

ಯಾವುದು ಮತ್ತೆ ಮತ್ತೆ ಪ್ರಯೋಗ ಹೊಂದುವುದೋ ಅದೂ 'ಅಂಶ'. (''यस्य बहुप्रयोगतरः सोऽप्यंशः।''). ಇವಿಷ್ಟೂ 'ಅಂಶ' ಸ್ವರದ ಪ್ರಾಮುಖ್ಯವನ್ನು ಎತ್ತಿ ಹಿಡಿಯುವ ಅಂಶಗಳು.

'ವಿದಾರಿ' ಎಂದರೆ ವಿಭಾಗ ಮಾಡುವುದು ಎಂದರ್ಥ. ಇದು ಎರಡು ವಿಧ. 'ಗೀತ ವಿದಾರಿ' ಮತ್ತು 'ಪದವಿದಾರಿ'. ಇದನ್ನು ಹೀಗೆ ಅರ್ಥ ಮಾಡಿಕೊಳ್ಳಬಹುದು. ರಾಗವರ್ಧನೆಯಲ್ಲಿ ಅಲ್ಲಲ್ಲಿ ನಿಲ್ಲಿಸಿಕೊಳ್ಳುವ ಸ್ವರ ಭಾಗಗಳನ್ನು ಸೃಷ್ಟಿಮಾಡುತ್ತದೆ. ಇದನ್ನೇ ಅಪನ್ಯಾಸವೆನ್ನುವುದು. (''यत्र गीतमिति समाप्तिरिति सम्भाव्यते सोऽपन्यासः।'') ಗೀತವು ಮುಗಿದಂತೆ ತೋರುವ ಭಾಗ (ಗೀತವೆಂದರೆ ಇಲ್ಲಿ ಗಾನವೆಂದು ಮಾತ್ರ ಅರ್ಥ) पादानां विदारणा खण्डनमिति यावत् । गीतके गीतखण्डमिति यावत् । ಎನ್ನುವಾಗ 'ಗೀತಖಂಡ'ವೆನ್ನುವುದು ಗೇಯ ಪ್ರಬಂಧಗಳಲ್ಲಿ ಬರುವ ಸ್ವರ, ಪದ, ತೇನ, ಬಿರುದು ಮುಂತಾದ ಭಾಗವೆಂದು ತಿಳಿಯಬಹುದು.

ಪ್ರಥಮ ವಿದಾರಿಯಲ್ಲಿ ಬಳಸುವ ನ್ಯಾಸ ಸ್ವರಗಳು ಅಂಶಸ್ವರಕ್ಕೆ ಸಂವಾದಿಯಾಗಿರಬೇಕಾದುದು ಅತ್ಯವಶ್ಯ. ಹಾಗಿದ್ದಲ್ಲಿ ಮಾತ್ರ ಅದು 'ಸನ್ಯಾಸ'ವೆನಿಸಿಕೊಳ್ಳುತ್ತದೆ. ಇದೇ ಸನ್ಯಾಸ ಸ್ವರವು ಪದಾಂತದಲ್ಲಿ ವಿನ್ಯಾಸಗೊಂಡರೆ(ಹಾಡಿ ಪುನಃ ಪುನಃ ಅಲ್ಲಿಗೇ ತಂದು ನಿಲ್ಲಿಸುವ ವಿಸ್ತಾರಕ್ರಮ), ಆಗ 'ವಿನ್ಯಾಸ'ವೆನಿಸುತ್ತದೆ. 'ನ್ಯಾಸ' - ''न्यस्यते त्यज्यते यस्मिन् येन वा गीतं तन्न्यास इति'' ಯಾವ ಸ್ವರದಲ್ಲಿ ಗೀತವು

ಮುಕ್ತಾಯಗೊಳ್ಳುವುದೋ ಅದು.

ಹಿಂದೆ ಉದ್ಧರಿಸಿದ "नेता च तारमन्द्राणां..." ಮುಂತಾದ ಶ್ಲೋಕವನ್ನು ಈಗ ಮತ್ತೊಮ್ಮೆ ಪರಿಶೀಲಿಸಿದರೆ ಅಂಶಸ್ವರದ ಸರ್ವ ವ್ಯಾಪಕತ್ವವು ಸ್ಪಷ್ಟವಾಗುತ್ತದೆ. ಅಂಶಕ್ಕೆ ಸಂವಾದಿಯಾದ ಸ್ವರಗಳಿಗೆ ಬಹುತ್ವವುಂಟು. (ಮತ್ತೆ ಮತ್ತೆ ಪ್ರಯೋಗ ಹೊಂದುವುದು) ವಿವಾದ ಸ್ವರಗಳದ್ದು ಅಲ್ಪ ಪ್ರಯೋಗ. ಆರೋಹಣಾವರೋಹಣಗಳಲ್ಲಿ ಒಂದು ಸ್ವರವನ್ನು ವರ್ಜಿಸುವುದು 'ಷಾಡವ'; ಎರಡು ಸ್ವರಗಳನ್ನು ವರ್ಜಿಸಿದಲ್ಲಿ 'ಔಡವ'. ಇಲ್ಲಿಗೆ ಜಾತಿ ಲಕ್ಷಣ ದರ್ಶಕವನ್ನು ವಿವರಿಸಿದ್ದಾಯಿತು.

*ಮತಂಗನ ನಿರೂಪಣೆಯಲ್ಲಿನ ನಿಷ್ಕೃಷ್ಟತೆ ಅಸಾಧಾರಣವೆನಿಸುತ್ತದೆ. ಏಕೆಂದರೆ, ಅಂಶಸ್ವರವನ್ನು ಕೇಂದ್ರವಾಗಿಟ್ಟುಕೊಂಡು ಅಪನ್ಯಾಸ, ವಿನ್ಯಾಸ, ಸನ್ಯಾಸ, ನ್ಯಾಸಸ್ವರಗಳನ್ನೊಳಗೊಂಡಂತೆ ರಾಗ ವಿಸ್ತರಣೆಯಲ್ಲಿ ಅನುಸರಿಸಬೇಕಾದ ಕ್ರಮವನ್ನು ಹಂತಹಂತವಾಗಿ ಸಮಸ್ತ ಸೂಕ್ಷ್ಮ ವಿವರಗಳೊಂದಿಗೆ ಚಿತ್ರಿಸಿರುವ ಮೊದಲಿಗನಾಗಿ ಶಾಸ್ತ್ರಕಾರನಿಗಿರಬೇಕಾದ ನಿಸ್ಸಂದಿಗ್ಧತೆಗೆ ದೃಷ್ಟಾಂತವನ್ನೊದಗಿಸಿದ್ದಾನೆ.*

ಮತಂಗನ ಮಾತುಗಳಲ್ಲಿ ದಶ ಲಕ್ಷಣಗಳು :

1. तत्रादौ जात्यादि प्रयोगो गृह्यते येनासौ ग्रहः ।
2. यो रागस्य विषयत्वेनावस्थितः स्वरः ।
3. अंशस्वरप्रयोगादारभ्य पञ्चस्वरपरा तारगतिः ।
4. मृदुस्वरो मन्द्रः । सा चा त्रिधा - अंशपरा न्यासपरा तत्परा चेति ।"
5. षट्स्वरं षाडवमिति ।
6. औडवम् । तेन पञ्चसंख्या लक्ष्यते ।
7. स्वराणामल्पशः प्रयोगादल्पत्वम् ।
8. बहुशः प्रयोगद्बहुत्वम् ।
9. न्यस्यते त्यज्यते यस्मिन् येन वा गीतं तन्न्यास इति ।
10. यत्र गीतमिति समाप्तिरिति (समाप्तमिति?) सम्भाव्यते सोऽपन्यासः ।

ಮತಂಗನೂ ಸೇರಿದಂತೆ ಪ್ರಾಚೀನರ ಅಭಿಪ್ರಾಯದಲ್ಲಿ ನಾಲ್ಕು ಸ್ವರಗಳಿಗಿಂತಲೂ ಕಡಿಮೆ ಇದ್ದಲ್ಲಿ ನಿರ್ದಿಷ್ಟ ಸಂದರ್ಭದಲ್ಲಿ ಮಾತ್ರ ಪ್ರಯೋಗ. ಗಮನಿಸಿ - "चतुःस्वरात् प्रभृति न मार्गः शबरपुलिन्दकारम्बोजवङ्गाङ्ग - किरातबाह्लीकान्ध्रद्राविडवनादिषु प्रयुज्यते । यदा चतुःस्वरप्रयोगोऽपि स्वरान्तरमाह अवकृष्ट-ध्रुवास्वेव वेदितव्यम् ।" 'ಅವಕೃಷ್ಟಧ್ರುವ' ದಲ್ಲಿ ಮಾತ್ರ ಪ್ರಯೋಗಿಸಬಹುದು.

(ಮುಂದುವರಿಯುವುದು)

# ಸಂಗೀತ ಸರಿತಾ

ಎಸ್. ಕೃಷ್ಣಮೂರ್ತಿ

*ಈ ಸಂಚಿಕೆಯಿಂದ ಶ್ರೀ ಎಸ್. ಕೃಷ್ಣಮೂರ್ತಿ ಅವರು ಕನ್ನಡ ಸಾಹಿತ್ಯ ಪರಿಷತ್ತಿನ ಪ್ರಕಟಣೆಗಾಗಿ ಬರೆದುಕೊಟ್ಟ "ಸಂಗೀತ ಸರಿತಾ" ಎಂಬ ಪುಸ್ತಕದಿಂದ ಆಯ್ದ ಭಾಗಗಳನ್ನು ಪ್ರಕಟಿಸುತ್ತಿದ್ದೇವೆ. ಶ್ರೀ ಕೃಷ್ಣಮೂರ್ತಿಗಳು ಮೈಸೂರಿನ ಸಂಗೀತ ಪರಂಪರೆಯಲ್ಲಿ ಪ್ರಖ್ಯಾತರಾದ ವಾಸುದೇವಾಚಾರ್ಯರರ ಮೊಮ್ಮಕ್ಕಳು. ಸಂಗೀತ ಕಲೆಯನ್ನು ಮೆಚ್ಚುವ, ಮೆಚ್ಚಿ ಅನುಭವಿಸುವ ಅವರಪರಿನಮಗೆಮಾರ್ಗದರ್ಶಕ. ಅನೇಕಸಂಗೀತಸ್ವರೂಪಗಳಕಾರ್ಯಕ್ರಮಗಳನ್ನು ಬೆಂಗಳೂರು "ಆಕಾಶವಾಣಿ"ಯ ವಾಣಿಜ್ಯ ವಿಭಾಗದ ನಿರ್ದೇಶಕರಾಗಿದ್ದಾಗ ನಿಯೋಜಿಸಿದ್ದರು. ಶ್ರೀಯುತರು ಸರಳವಾಗಿ, ಸುಂದರವಾಗಿ ಸಂಗೀತ ಕಲೆಯನ್ನು ಜನಸಾಮಾನ್ಯರಿಗೆ ಈ ಪುಸ್ತಕದ ಮೂಲಕ ಪರಿಚಯಿಸಿದ್ದಾರೆ. ಅವರ ಅನುಭವದ ಪರಿಚಯದಿಂದ ಈ ಪುಸ್ತಕದ ಹಿನ್ನೆಲೆ ಎದ್ದುಕಾಣುತ್ತದೆ. ಇದನ್ನು "ಅನನ್ಯ ಅಭಿವ್ಯಕ್ತಿ"ಯಲ್ಲಿ ಪ್ರಕಟಿಸಲು ಅನುಮತಿ ನೀಡಿದ ಲೇಖಕರಾದ ಶ್ರೀ ಎಸ್. ಕೃಷ್ಣಮೂರ್ತಿ ಹಾಗೂ ಕನ್ನಡ ಸಾಹಿತ್ಯ ಪರಿಷತ್ತಿಗೆ ಅನನ್ಯವು ಕೃತಜ್ಞತೆ ಸಲ್ಲಿಸುತ್ತದೆ.*

–ಸಂ.

೭, ಡಿಸೆಂಬರ್ ೧೯೬೪

ಕುಸುಮ,

ಹಿಂದಕ್ಕೆ ಒಬ್ಬ ರಾಜ ಇದ್ದನಂತೆ. "ಸಂಗೀತ" ಎಂದರೆ "ತೊಲ ಎಷ್ಟು?" ಎಂದು ಕೇಳುವಷ್ಟು ರಸಿಕ ಶಿಖಾಮಣಿ ಆ ಪ್ರಭು ! ಆದರೂ ತನಗೂ ಸಂಗೀತದಲ್ಲಿ ಉತ್ತಮವಾದ ಅಭಿರುಚಿಯಿದೆ, ಆಳವಾದ ಪಾಂಡಿತ್ಯವಿದೆ ಎಂದು ತೋರಿಸಿಕೊಳ್ಳಬೇಕೆಂಬ ಹುಚ್ಚು ಚಪಲ ಅವನಿಗೆ. ಇದಕ್ಕೆ ಅವನು ಒಂದು ಉಪಾಯ ಹೂಡಿದ್ದ. ತನ್ನ ಜರಿ ರುಮಾಲಿಗೆ ಕಟ್ಟಿದ್ದ ಒಂದು ಕರಿಯ ರೇಷ್ಮೆ ದಾರವನ್ನು ಹಿಡಿದು ಸಿಂಹಾಸನದ ಹಿಂದೆ ಯಾರಿಗೂ ಕಾಣದೆ ಕುಳಿತಿರುವಂತೆ ತನ್ನ ಆಸ್ಥಾನ ವಿದ್ವಾಂಸನೊಬ್ಬನಿಗೆ ಅಪ್ಪಣೆ ಮಾಡಿದ. ಸಂಗೀತ ಕಚೇರಿಯು ನಡೆಯುತ್ತಿರುವಾಗ ಸಮಯೋಚಿತವಾದ ಸಂದರ್ಭಗಳನ್ನು ಗಮನಿಸಿ ವಿದ್ವಾಂಸ ಆ ದಾರವನ್ನು ಮೆಲ್ಲನೆ ಎಳೆಯುತ್ತಿದ್ದ. ಕೂಡಲೆ ರಾಜ ಲೊಚಗುಟ್ಟಿ, ಕಿರುನಗೆ ಬೀರಿ ತಲೆದೂಗಿ ತನ್ನ ಮೆಚ್ಚುಗೆಯನ್ನು ವ್ಯಕ್ತಪಡಿಸುತ್ತಿದ್ದ! ರಾಜನ ಕಲಾಭಿರುಚಿಯನ್ನೂ ವಿದ್ವತ್ಪರಿಶ್ರಮವನ್ನೂ ಕಂಡು ವಿದ್ವಾಂಸರು ಬೆರಗಾಗುತ್ತಿದ್ದರು! ಈಗೇಕೆ ಈ ಕತೆಯನ್ನು ಹೇಳುದಕ್ಕೆ ಬಂದೆ ಎಂದರೆ...

ನಾನು ತಾತನವರ ಬಳಿ ಕುಳಿತು ಗಂಟೆಗಟ್ಟಲೆ ಹರಟುತ್ತಿದ್ದೆ. ವಿಷಯ : ಸಂಗೀತ, ಸಾಹಿತ್ಯ. ಅವರೊಂದಿಗೆ ಮಾತನಾಡುವುದೆಂದರೆ ಹೆಜ್ಜೆ ಹೆಜ್ಜೆಗೂ ಜ್ಞಾನ ಸಂಪಾದನೆ, ಜೊತೆಗೆ ಹಾಸ್ಯ, ವಿನೋದ. ನಾನು ನಕ್ಕಾಗಲೆಲ್ಲ ಅದರ ಕಾರಣ ತಿಳಿಯಬೇಕೆಂದು ನಿನಗೆ ಕುತೂಹಲ. ಆಗ ನೀನು ಇನ್ನೂ ಪುಟ್ಟ ಹುಡುಗಿ. ನನ್ನ ತೊಡೆಯೇರಿ, "ಏನಣ್ಣ ಅದು ತಾತ ಹೇಳಿದ್ದು ? ಅಷ್ಟೊಂದು ನಗುತ್ತಿದ್ದೀಯೆ ! ನನಗೂ ಹೇಳು" ಎಂದು ನನ್ನ ಗಲ್ಲ, ಮೂತಿ ತಿವಿಯುತ್ತಿದ್ದಿ. ಅದೆಲ್ಲ ಈಗ ನಿನಗೆ ಅರ್ಥವಾಗುವುದಿಲ್ಲ, ಕುಸುಮ. ದೊಡ್ಡವಳಾದ ಮೇಲೆ ಎಲ್ಲವನ್ನೂ ಹೇಳುತ್ತೇನೆ" ಎಂದು ಎಷ್ಟು ಬಗೆಯಲ್ಲಿ ಹೇಳಿದರೂ ನೀನು ಕೇಳುತ್ತಿರಲಿಲ್ಲ. ಹಠ ಹಿಡಿಯುತ್ತಿದ್ದಿ. ಕೋಪ ಬಂದು ನಾನು ಗದರಿಸುತ್ತಿದ್ದೆ. ನಿನ್ನ ಮುಖ ಚಿಕ್ಕದಾಗುತ್ತಿತ್ತು. ಮಕ್ಕಳನ್ನು ಕಂಡು ಮುಖ ಸಿಂಡರಿಸಿಕೊಳ್ಳುವುದು, ಗದರಿಸುವುದು, ಹೊಡೆಯುವುದು, ಬಡಿಯುವುದು ಎಂದರೆ ನಿನ್ನ ಮುತ್ತಜ್ಜನಿಗೆ ಸ್ವಲ್ಪವೂ ಸರಿ ಬೀಳುತ್ತಿರಲಿಲ್ಲ. ನಿನ್ನನ್ನು ಕಂಡರಂತೂ ಪಂಚಪ್ರಾಣ. "ಇಲ್ಲಿ ಬಾ ತಾಯಿ, ನಾನು ಹೇಳುತ್ತೇನೆ" ಎಂದು ನಿನ್ನನ್ನು ತೊಡೆಯ ಮೇಲೆ ಕುಳ್ಳಿರಿಸಿಕೊಂಡು ನಿನ್ನ ಗುಂಗುರು ಕೂದಲ ನಡುವೆ ಬೆರಳಾಡಿಸುತ್ತ ಮತ್ತೆ ಆ ವಿಷಯವನ್ನೆಲ್ಲ ಬೇಸರವಿಲ್ಲದೆ ತಿಳಿಯಾದ ಮಾತುಗಳಲ್ಲಿ

ಕತೆ ಹೇಳುವಂತೆ ಹೇಳುತ್ತಿದ್ದರು. ಆದರೆ ನಿನಗೆ ತಲೆ ಬಾಲ ಯಾವುದೂ ಅರ್ಥವಾಗುತ್ತಿರಲಿಲ್ಲ. ಆದರೂ ದೊಡ್ಡವರಿಬ್ಬರ ಮಾತಿನ ಮಧ್ಯೆ ನನಗೂ ಸ್ಥಾನಮಾನ ದೊರಿಯಿತಲ್ಲಾ ಎಂದೇ ಒಂದು ಬಿಗುಮಾನ ನಿನ್ನ ಮುಖದ ಮೇಲೆ. ನನ್ನನ್ನೇ ನೆಟ್ಟಗಣ್ಣಿನಿಂದ ನೋಡುತ್ತಾ, ನಾನು ನಕ್ಕಾಗ ನೀನೂ ಒಂದು ಪೆಚ್ಚು ನಗೆ ನಗುತ್ತಿದ್ದಿ. ನಿನ್ನ ಆ ಸ್ಥಿತಿಯನ್ನು ನೋಡಿದಾಗಲೆಲ್ಲ ನನಗೆ ಈ ರಾಜನ ಕತೆ ಜ್ಞಾಪಕಕ್ಕೆ ಬರುತ್ತಿತ್ತು.

ಆಗ ನೀನು ತಿಳಿಯಬಯಸುತ್ತಿದ್ದ ವಿಷಯಗಳನ್ನು ವಿವರಿಸಲು ಈಗ ಸಮಯ ಬಂದಿದೆ. ಈಗಾಗಲೇ ಶಾಲೆಯಲ್ಲಿ, ಮನೆಯಲ್ಲಿ ಎರಡು ವರ್ಷಗಳ ಕಾಲ ಸಂಗೀತವನ್ನು ಅಭ್ಯಾಸ ಮಾಡಿರುವೆಯಾದುದರಿಂದ ನಾನು ತಿಳಿಸಬೇಕೆಂದಿರುವ ವಿಷಯಗಳನ್ನು ಅರ್ಥಮಾಡಿಕೊಳ್ಳಲು ಸಾಕಷ್ಟು ಅರ್ಹತೆ ಬಂದಿದೆ ಎಂದು ಭಾವಿಸುತ್ತೇನೆ. ಆದರೆ ನಿನ್ನ ಸ್ಕೂಲಿನಲ್ಲಿ ಮೇಷ್ಟ್ರು ಹೇಳುವ ವಿಷಯಗಳನ್ನೇ ಕುರಿತು ಮತ್ತೆ ಬರೆಯುವುದಾಗಲೀ, ನನ್ನ ಬರವಣಿಗೆಯನ್ನು ಯಾವುದೋ ಒಂದು ಕ್ರಮ ನಿರ್ಬಂಧಕ್ಕೆ ಒಳಪಡಿಸುವುದಕ್ಕಾಗಲಿ ನನಗೆ ಇಷ್ಟವಿಲ್ಲ. ನನಗೆ ಎಂದು ಯಾವ ವಿಷಯವನ್ನು ಕುರಿತು ಬರೆಯಬೇಕೆನಿಸುವುದೋ ಅಂದು ಅದನ್ನು ಕುರಿತು ಬರೆಯುತ್ತೇನೆ. ಸ್ಕೂಲಿನಲ್ಲಿ ಹೇಳಿಕೊಡುವ ವಿಷಯಗಳ ಜೊತೆಗೆ ನನ್ನ ಪತ್ರಗಳನ್ನೂ ಅವಕಾಶ ದೊರೆತಾಗ ಓದಿಕೊಂಡರೆ ನಿನ್ನ ತಿಳಿವಳಿಕೆ ಮತ್ತಷ್ಟು ವಿಸ್ತಾರವಾದೀತು ಎಂಬುದು ನನ್ನ ಆಶಯ. ಹೀಗೆಂದ ಮಾತ್ರಕ್ಕೆ ಪತ್ರ ವ್ಯವಹಾರ ''ಒನ್‌ವೇ ಟ್ರಾಫಿಕ್'' ಆಗಿರಬೇಕು ಎಂದೇನಲ್ಲ. ಯಾವುದಾದರೂ ನಿರ್ಧಿಷ್ಟ ವಿಷಯಗಳ ಬಗೆಗೆ ಮಾಹಿತಿ ಬೇಕು ಎನ್ನಿಸಿದರೆ ನನಗೆ ತಿಳಿಸು. ಅಗತ್ಯವಾಗಿ ಬರೆದು ತಿಳಿಸುತ್ತೇನೆ. ಇತರ ಕೆಲಸ ಕಾರ್ಯಗಳೂ ಹೆಚ್ಚಾಗಿರುವುದರಿಂದ ಮೇಲಿಂದ ಮೇಲೆ ಬರೆಯುವುದಕ್ಕಾಗಲಿ ಅತಿ ಉದ್ದವಾದ ಪತ್ರಗಳನ್ನು ಬರೆಯುವುದಾಗಲೀ ಸಾಧ್ಯವಾಗಲಾರದು. ಆದರೆ ವಾರಕ್ಕೊಂದಾವರ್ತಿಯಾದರೂ ತಪ್ಪದೆ ಬರೆಯುತ್ತಿರುತ್ತೇನೆ. ಹೇಳಬೇಕೆಂದಿರುವ ವಿಷಯವನ್ನು ಒಂದೇ ಪತ್ರದಲ್ಲಿ ಅಡಗಿಸಿ ಬರೆಯಲು ಆಗದೆ ಹೋದಲ್ಲಿ ಎರಡು ಮೂರು ಭಾಗಗಳಲ್ಲಿ ಬರೆದು ತಿಳಿಸುತ್ತೇನೆ. ಆದುದರಿಂದ ಯಾವ ಪತ್ರವನ್ನೂ ಓದಿದೊಡನೆಯೆ ಹರಿದು ಬಿಸಾಡಬೇಡ. ಎಲ್ಲವನ್ನೂ ಕಲೆಹಾಕಿ ಕೂಡಿಟ್ಟುಕೊಂಡರೆ ಬೇಕಾದಾಗ ಒಟ್ಟಿಗೆ ಸೇರಿಸಿ ಓದಿಕೊಳ್ಳಲು ಸಹಾಯವಾಗುತ್ತದೆ.

ನಿನ್ನ ಮನೆಯ ಮೇಷ್ಟ್ರು ತುಂಬ ವಿದ್ಯಾವಂತರು. ಲಕ್ಷ್ಯ ಮತ್ತು ಲಕ್ಷಣ ಶಾಸ್ತ್ರಗಳನ್ನು ಚೆನ್ನಾಗಿ ವ್ಯಾಸಂಗ ಮಾಡಿದ್ದಾರೆ. ನನ್ನ ಪತ್ರಗಳನ್ನು ಅವರಿಗೂ ಓದಿ ಹೇಳು. ನನ್ನ ಬರವಣಿಗೆ ಎಲ್ಲಿಯಾದರೂ ಕ್ಲಿಷ್ಟವಾಗಿದ್ದರೆ ಅದನ್ನು ಬಿಡಿಸಿ ವಿವರಿಸುತ್ತಾರೆ. ನಿನ್ನ ಮಮ್ಮಿಗೂ ತಕ್ಕಮಟ್ಟಿಗೆ ಸಂಗೀತ ಪಾಠವಾಗಿದೆ. ನಿನ್ನ ಸಂದೇಹಗಳನ್ನು ನಿವಾರಿಸಲು ಆಕೆಯು ನೆರವಾಗಬಲ್ಲಳು.

## ಕಲಿಯುವುದು ಸ್ವಲ್ಪವಾದರೂ ಕಲ್ಪದಂತಿರಲಿ

೪, ಜನವರಿ ೧೯೭೦

ಕುಸುಮ,

ಇದೀಗ ನಿನ್ನ ಪತ್ರ ಕೈ ಸೇರಿದೆ. ಬೇಗಡೆ ರಾಗದ ಅಟ್ಟ ತಾಳದ ವರ್ಣ ಪಾಠ ಮಾಡುತ್ತಿದ್ದೀನಿ ಎಂದು ಬರೆದಿರುವೆ. ಸಂತೋಷ, ಚೆನ್ನಾಗಿ ಅಭ್ಯಾಸ ಮಾಡು. ಬೇಗಡೆ ರಾಗ ಎಂದೊಡನೆಯೆ ಹಲವಾರು ವಿಷಯಗಳನ್ನು ತಿಳಿಸಬೇಕು ಎನ್ನಿಸುತ್ತದೆ ನನಗೆ.

ನಿನ್ನ ಮುತ್ತಾತಂದಿರ ಗುರು ಪಟ್ಣಂ ಸುಬ್ರಹ್ಮಣ್ಯಯ್ಯರ್ ಅವರಿಗೆ ''ಬೇಗಡೆ ಸುಬ್ರಹ್ಮಣ್ಯಯ್ಯರ್'' ಎಂದೇ ಅಡ್ಡ ಹೆಸರು ಬಿದ್ದಿತ್ತು. ಆ ರಾಗವನ್ನು ಹಾಡುವುದರಲ್ಲಿ ಅವರದು ಎತ್ತಿದ ಕೈ. ಅದೂ ಯಾರಿಂದ ಅವರಿಗೆ ಆ ನಾಮಕರಣ ? ಸುಪ್ರಸಿದ್ಧ ವಾಗ್ಗೇಯಕಾರ ಮೈಸೂರು ಸದಾಶಿವರಾಯರಿಂದ.

ತಾತ ಪಟ್ಣಂ ಸುಬ್ರಹ್ಮಣ್ಯಯ್ಯರ್ ಅವರನ್ನು ಆಶ್ರಯಿಸಿ ನಾಲ್ಕಾರು ತಿಂಗಳು ಕಳೆದಿದ್ದರೂ ಪಾಠಪ್ರವಚನಗಳು ಪ್ರಾರಂಭವಾಗಲಿಲ್ಲ. ಅಲ್ಲಿಯವರೆಗೆ ಅವರಿಗೆ ವಿಧಾಯಕವಾಗಿದ್ದ ಕೆಲಸವೆಂದರೆ

ಪ್ರತಿದಿನ ಬೆಳಗಿನ ಝಾವ ಎದ್ದು ಗುರುಗಳು ಸಾಧಕ ಮಾಡುವ ವೇಳೆ ತಂಬೂರಿ ಮೀಟುತ್ತಾ ಕುಳಿತಿರುವುದು, ಹಿರಿಯ ಶಿಷ್ಯ ಪರಮೇಶ್ವರಯ್ಯ ಅವರಿಗೆ ಪಾಠ ನಡೆಯುವ ವೇಳೆ ಗಮನವಿಟ್ಟು ಕೇಳುವುದು, ಊಟವಾದ ಮೇಲೆ ಒಬ್ಬರೇ ಕುಳಿತು ಕೃತಿ ರಚನೆಯಲ್ಲಿ ತೊಡಗಿರುವಾಗ ಗುರುಗಳ ಪಕ್ಕದಲ್ಲಿ ಕುಳಿತಿರುವುದು, ಗುರುಗಳ ಕಛೇರಿಗಳಿಗೆ ಹೋಗಿಬರುವುದು, ಇಷ್ಟೆ. ತಾತನಿಗೋ ವಿದ್ಯೆ ಕಲಿಯಬೇಕೆಂಬ ಆಸೆ ಆತುರ ಒಂದೆಡೆ, ಬಾಯಿಬಿಟ್ಟು ಕೇಳಲು ಅಂಜಿಕೆ ಇನ್ನೊಂದೆಡೆ.

ಈ ಸನ್ನಿವೇಶದಲ್ಲಿ ಒಂದು ದಿನ ಗುರುಗಳೇ ನುಡಿದರು : ''ವಾಸು ನಿನ್ನ ಆಸೆ ಆಕಾಂಕ್ಷೆಗಳು ಏನು ಎಂತು ಎಂಬುದು ನನಗೆ ತಿಳಿಯದೆ ಇಲ್ಲ. ವೃಥಾ ಕಾಲಹರಣವಾಗುತ್ತಿಯೆಂದು ಭಾವಿಸಬೇಡ. ಇದುವರೆಗೆ ನಿನ್ನ ಕನಸಿನ ಮಂದಿರಕ್ಕೆ ಅಡಿಪಾಯ ಸಿದ್ಧಗೊಳಿಸುತ್ತಿದ್ದೆ. ಇನ್ನು ಮಂದಿರದ ನಿರ್ಮಾಣ ಎಷ್ಟರ ಮಾತು ? ಸಂಗೀತವನ್ನು ಅಭ್ಯಾಸ ಮಾಡಬಯಸುವವನಿಗೆ ಶುದ್ಧವಾದ, ಶಾಸ್ತ್ರ ಸಮ್ಮತವಾದ ಸಂಗೀತದ ಕೇಳ್ಮೆಯಿಂದ ಆಗುವ ಪ್ರಯೋಜನ ಮಹತ್ತರವಾದುದು. ಏಕಾಗ್ರಚಿತ್ತತೆಯಿಂದ ಕೇಳಿದ ಬಳಿಕ ಯಾವ ವರ್ಣವನ್ನೇ ಆಗಲಿ ಕೀರ್ತನೆಯನ್ನೇ ಆಗಲಿ ಶೀಘ್ರವಾಗಿ ಸುಲಭವಾಗಿ ಕರಗತ ಮಾಡಿಕೊಳ್ಳಬಹುದು'' ಎಂದು.

ಮಾರನೆಯ ದಿನವೇ ಕ್ರಮವಾದ ಶಿಕ್ಷಣ ಪ್ರಾರಂಭವಾಯಿತು. ''ಬೇಗಡೆ ನನಗೆ ಅತ್ಯಂತ ಪ್ರಿಯವಾದ ರಾಗ. ವೀರರಸ, ಕರುಣರಸ ಪ್ರಧಾನವಾದ ಆ ರಾಗದಲ್ಲಿ ಒಂದು ರಾಜ ಠೀವಿಯಿದೆ, ಗಾಂಭೀರ್ಯವಿದೆ, ಮಧ್ಯಮ ನಡೆಗೆ ಅಂದರೆ ತಾನ ವಿನ್ಯಾಸಕ್ಕೆ ಎತ್ತಿದ ರಾಗ. ಆ ರಾಗದಲ್ಲಿ ನಾನು ರಚಿಸಿರುವ ವರ್ಣದಿಂದಲೆ ಪಾಠ ಪ್ರಾರಂಭಿಸುತ್ತೇನೆ'' ಎಂದರಂತೆ.

''ಏನು ಪ್ರಾರಂಭವೇ ವರ್ಣದಿಂದಲೆ?'' ಎಂಬ ಪ್ರಶ್ನೆ ಕೇಳಿಯೇ ಕೇಳುವಿ ಎಂದು ನನಗೆ ಗೊತ್ತು. ತಾತ ತಿರುವಯ್ಯಾರಿಗೆ ಹೋಗುವಾಗಲೇ ಅವರಿಗೆ ಸಂಗೀತದಲ್ಲಿ ಪ್ರವೇಶವಾಗಿತ್ತು. ಪಟ್ಣಂ ಸುಬ್ರಹ್ಮಣ್ಯಯ್ಯರ್ ಅವರ ಸಂಗೀತಕ್ಕೆ ಅವರು ಮಾರುಹೋದ ಬಗೆ, ಅವರಲ್ಲಿ ಉಚ್ಚ ಶಿಕ್ಷಣ ಪಡೆಯಲು ಅವರು ಪಟ್ಟ ಭಗೀರಥ ಪ್ರಯತ್ನ, ಅದು ಕೈಗೂಡಿದ ಕ್ರಮ, ಎಲ್ಲ ಒಂದು ದೊಡ್ಡ ಕಥೆ. ಮತ್ತೆ ಯಾವಾಗಲಾದರೂ ಹೇಳುತ್ತೇನೆ.

ಮೂರೇ ದಿನಗಳಲ್ಲಿ ವರ್ಣದ ಪಾಠ ಮುಗಿಯಿತು. ಆದರೂ ಮುಂದೆ ಸುಮಾರು ಮೂರು ತಿಂಗಳವರೆಗೂ ಬೇರೆ ಪಾಠವೇ ನಡೆಯಲಿಲ್ಲ. ರಾತ್ರಿ ಹಗಲು ಅದೇ ವರ್ಣದ ಸಾಧನೆ. ವರ್ಣದ ಪ್ರತಿಯೊಂದು ಆವರ್ತವನ್ನೂ ಕಾಲ, ಮಧ್ಯಮ ಕಾಲ, ತ್ರಿಕಾಲಗಳಲ್ಲಿ ಹಾಡುವುದು, ಮತ್ತೆ ಅದನ್ನೇ ತ್ರಿಕಾಲ, ಮಧ್ಯಮಕಾಲ, ಕಾಲದಲ್ಲಿ ಹಾಡುವುದು; ಹೀಗೆ ಕೆಲವು ದಿನ ಸಾಧನೆ ಮಾಡಿಸಿದರು. ಇದಾದ ನಂತರ ವರ್ಣದ ಒಂದೊಂದು ಆವರ್ತವನ್ನೂ ಒಂದೊಂದು ದಿನ ಹಾಡಿಸಿ ಅದರಲ್ಲಿರುವ ರಾಗಭಾವ, ಸಂಚಾರಗಳನ್ನೂ ವಿವರಿಸಿ, ಆ ಆವರ್ತದ ಸ್ವರ ಚೌಕಟ್ಟನ್ನೇ ಅನುಸರಿಸಿ ರಾಗಾಲಾಪನೆ ಮಾಡಿಸಿದರು. ಇದಾದ ಬಳಿಕ, ''ವಾಸು, ಬೇಗಡೆ ರಾಗದ ಮರ್ಮವನ್ನೆಲ್ಲ ಬಿಡಿಸಿ ಹೇಳಿದ್ದೇನೆ. ಆ ರಾಗವನ್ನು ಇನ್ನು ಪ್ರತ್ಯೇಕವಾಗಿ ಪಾಠ ಹೇಳಬೇಕಾಗಿಲ್ಲ. ನಿನ್ನ ಯೋಗ್ಯತಾನುಸಾರ ಅದನ್ನು ನೀನು ವೃದ್ಧಿ ಮಾಡಿಕೊಳ್ಳಬಹುದು'' ಎಂದರು.

ಎಂಥ ಕೂಲಂಕುಷವಾದ ಪಾಠಕ್ರಮ ನೋಡಿದೆಯಾ, ಕುಸುಮಾ ? ಹೇಳಿ ಕೊಡುವವರಿಗಾಗಿ ಕಲಿಯುವವರಿಗಾಗಲಿ ಈಗ ಆ ವ್ಯವಧಾನ, ತಾಳ್ಮೆ ಎಲ್ಲಿ ಬಂತು ? ಎಷ್ಟು ಬೇಗ ಎಷ್ಟು ವರ್ಣ ಎಷ್ಟು ಕೀರ್ತನೆ ಕಲಿತೇನು ಎಂಬ ಆತುರವೇ ಎಲ್ಲೆಲ್ಲೂ ಕಾಣುತ್ತಿದೆ ನನಗೆ. ಕಲಿತದ್ದು ಸ್ವಲ್ಪವಾದರೂ ಕಲ್ಪದಂತಿರಬೇಕು ಎಂಬ ದೃಷ್ಟಿಯಿಟ್ಟು, ಆಳವಾಗಿ, ನಿಶಿತವಾಗಿ ಅಭ್ಯಾಸ ಮಾಡುವವರೇ ವಿರಳ.

ನೀನೂ ವರ್ಣವನ್ನು ಈ ರೀತಿ ಅಭ್ಯಾಸಮಾಡು. ಅದರ ಪ್ರಯೋಜನ ನಿನಗೇ ಕಾಲಾನುಕಾಲಕ್ಕೆ ವ್ಯಕ್ತವಾಗುತ್ತದೆ.

(ಮುಂದುವರಿಯುವುದು)

# ನೀಲಮ್ಮನವರ ಅನಾಥ ಅಂತ್ಯ

ಬಿ.ವಿ.ಕೆ. ಶಾಸ್ತ್ರಿ

ಮಾಸ್ತಿ ವೆಂಕಟೇಶಯ್ಯಂಗಾರ್ಯರ ಕಿರು ಕಾದಂಬರಿ - ಸುಬ್ಬಣ್ಣ ಒಬ್ಬ ಸಂಗೀತಗಾರನ ದಾರುಣ ಜೀವನವನ್ನು ಚಿತ್ರಿಸಿದೆ. ಅವರು ಕೇಳಿದ್ದ ಒಬ್ಬ ಸಂಗೀತಗಾರನನ್ನು ದೃಷ್ಟಿಯಲ್ಲಿ ಇಟ್ಟುಕೊಂಡು ರಚಿತವಾದುದು ಈ ಕಾದಂಬರಿ. ಆತನ ಹೆಸರು ಶಾಮಣ್ಣ. ''ಭಿಕ್ಷಾನ್ನದ ಶಾಮಣ್ಣ'' ಎಂದು ಕರೆಯುತ್ತಿದ್ದರು. ಅವರು ಈ ಶತಮಾನದ ಆದಿ ಭಾಗದಲ್ಲಿ ಜೀವಿಸಿದ್ದರು. ಮೈಸೂರಿಗೆ 18 ಮೈಲಿ ದೂರದ ಟಿ. ನರಸೀಪುರದಲ್ಲಿ ವಾಸ ಮಾಡುತ್ತಿದ್ದರು. ಅವರು ಎಲ್ಲಿಂದ ಬಂದರೋ ಯಾರಿಗೂ ತಿಳಿಯದು. ಆದರೆ ಅವರದು ಪಿಟೀಲು ವಾದನದಲ್ಲಿ ಅಪೂರ್ವ ಸಿದ್ಧಿ. ಯಾವುದೋ ಮಂಟದಲ್ಲಿ ವಾಸ. ಮಧ್ಯಾಹ್ನ ನಾಲ್ಕಾರು ಮನೆಗಳಲ್ಲಿ ಭಿಕ್ಷೆ ಬೇಡಿ ಅದರಲ್ಲಿ ಸ್ವಲ್ಪ ಬೇರೆ ಭಿಕ್ಷುಕರಿಗೂ ಹಂಚಿ ಉಳಿದುದನ್ನು ತಾವು ತಿನ್ನುತ್ತಿದ್ದರು. ಯಾರ ಜೊತೆಯಲ್ಲಿಯೂ ಬೆರೆಯರು. ದೇವಾಲಯಕ್ಕೆ ಹೋಗುತ್ತಿದ್ದರು ಎಂದಾದರೂ ಅಪರೂಪಕ್ಕೆ ದೇವರ ಮುಂದೆ ಸಂಗೀತ ಸೇವೆ ಸಲ್ಲಿಸುತ್ತಿದ್ದರು. ಕೊನೆಗೆ ಯಾರೂ ಹೇಳಿಕೇಳುವವರಿಲ್ಲದೆ ಮಂಟಪದಲ್ಲಿಯೇ ಅಸುನೀಗಿದರು.

ನೀಲಮ್ಮ ಕಡಾಂಬಿಯವರು ಸತ್ತ ರೀತಿಯನ್ನು ನೆನೆಸಿಕೊಂಡಾಗ ಭಿಕ್ಷಾನ್ನದ ಶಾಮಣ್ಣನವರ ನೆನಪು ಬರುವುದು ಸಹಜ. ಸಾವಿನಲ್ಲಿ ಸಾಮ್ಯವಿದ್ದರೂ, ಇಬ್ಬರ ಜೀವನಗಳೂ ನಡೆದು ಬಂದ ರೀತಿ ಬೇರೆ ಬೇರೆ. ಶಾಮಣ್ಣನವ ಹಿನ್ನೆಲೆ ಯಾರಿಗೂ ತಿಳಿಯದು. ಅವರೂ ಹೇಳಲಿಲ್ಲ. ಆದರೆ ನೀಲಮ್ಮನವರು ಒಂದು ಸುಸಂಸ್ಕೃತ ಕುಟುಂಬದಲ್ಲಿ ಹುಟ್ಟಿದವರೆಂದು ಎಲ್ಲರೂ ಬಲ್ಲ ವಿಷಯವೇ. ತಂದೆ ವೆಂಕಟಾಚಾರ್ಯರು ಸ್ವತಃ ವೈಣಿಕರೇ ಅಲ್ಲದೆ ಪೋಲಿಸ್ ಇನ್ಸ್‌ಪೆಕ್ಟರ್ ಹುದ್ದೆಯಲ್ಲಿದ್ದು ನಿವೃತ್ತರಾದ ನಂತರ ಮೇಲುಕೋಟೆಯಲ್ಲಿ ನೆಲೆಸಿ ಅಲ್ಲಿ ದೇವಾಲಯದ ಮುಖ್ಯಸ್ಥರಾಗಿದ್ದವರು. ಮಗಳಿಗೆ ಮಮತೆಯಿಂದ ಸಂಗೀತ ಕಲಿಸಿದರು. ಚಿಕ್ಕ ವಯಸ್ಸಿನಲ್ಲಿಯೇ ಸಮರ್ಥ ವೀಣಾವಾದಕಿ ಎಂದು ಮಾನಿತರಾಗಿದ್ದವರು. ಅಂದು ಸಮಾಜದ ಮಧ್ಯವರ್ಗದವರ ಮನೆಗಳಲ್ಲಿ ಹೆಣ್ಣು ಮಕ್ಕಳಿಗೆ ವೀಣೆ ಕಲಿಸುವುದು ಸಾಧಾರಣ ಪದ್ಧತಿ. ಅದರಲ್ಲಿಯೂ ಒಳ್ಳೆಯ ಕಡೆಯ ವರ ದೊರಕಲು ಹೆಣ್ಣುಮಕ್ಕಳಿಗೆ ವೀಣಾವಾದನ ಒಂದು ಅರ್ಹತೆಯಾಗಿತ್ತು.

ಮುಂದೆ ಆಸ್ಥಾನ ವಿದ್ವಾನ್ ಲಕ್ಷ್ಮೀನಾರಾಯಣಪ್ಪನವರೇ ಮುಂತಾದ ಬೇರೆ ಬೇರೆ ವಿದ್ವಾಂಸರಿಂದ ಮಾರ್ಗದರ್ಶನ ಪಡೆದ ನೀಲಮ್ಮನವರು ಪ್ರಾಯಶಃ ಸಾರ್ವಜನಿಕವಾಗಿ ವೇದಿಕೆಯ ಮೇಲೆ ಸಂಗೀತ ಕಚೇರಿ ಮಾಡಿದ ಶಿಷ್ಯವರ್ಗದ ಮೊದಲ ಮಹಿಳೆ ಎನ್ನಬಹುದು. ಅದಕ್ಕೆ ಮೊದಲು ಸಂಗೀತ-ನೃತ್ಯ ಮನೆತನಗಳಿಂದ ಬಂದವರು ಮಾತ್ರ ಈ ರೀತಿ ಬಹಿರಂಗವಾಗಿ ಸಂಗೀತ ಕಚೇರಿ ಮಾಡುತ್ತಿದ್ದರು. ನೀಲಮ್ಮನವರು ವೇದಿಕೆಯ ಮೇಲೆ ಕಾಣಿಸಿಕೊಳ್ಳುವುದಕ್ಕೆ ಬಹು ಹಿಂದೆಯೇ ಮೈಸೂರು ಸಹೋದರಿಯರೆಂದು ಪ್ರಸಿದ್ಧರಾಗಿದ್ದ ಚಂದ್ರಮುಖಿ ಮತ್ತು ಶಾರದಾಂಬ ಸಾರ್ವಜನಿಕವಾಗಿ ಕಚೇರಿ ಮಾಡುತ್ತಿದ್ದರು. ಇವರು ಟಿ. ಚೌಡಯ್ಯನವರ ಸಹೋದರಿಯರು. ಹಾಗೆಯೇ ಆದಿಲಕ್ಷಮ್ಮ ಬೆಂಗಳೂರು ನಾಗರತ್ನಮ್ಮ, ಕೋಲಾರ ನಾಗರತ್ನಮ್ಮ ಮುಂತಾದವರು ಕಚೇರಿ ಮಾಡುತ್ತಿದ್ದರು.

ನಾನು ಮೊದಲು ನೀಲಮ್ಮನವರನ್ನು ನೋಡಿದುದು - ನಾನು ಹುಟ್ಟಿ ಬೆಳೆದ ನಂಜನಗೂಡಿನಲ್ಲಿಯೇ. ಅವರ ಪತಿ ಕೃಷ್ಣಸ್ವಾಮಿ ಕಡಾಂಬಿಯವರು ನಂಜನಗೂಡಿನಲ್ಲಿ ವಕೀಲರಾಗಿದ್ದರು. ಅವರದು ಊರಿನ ಪಶ್ಚಿಮ ಅಂಚಿನಲ್ಲಿದ್ದ ವಿಶಾಲವಾದ ಕಾಂಪೌಂಡಿನ ಮಧ್ಯೆ ಇದ್ದ ಚಿಕ್ಕ ಮನೆ. ಅವರ ಮನೆಯ ಪಕ್ಕದಲ್ಲಿಯೇ ನಮ್ಮ ಶಾಲೆಯ ವಿಶಾಲವಾದ ಆಟದ ಮೈದಾನ. ಆ ಮನೆಯಲ್ಲಿ ಯಾರೋ ಲಾಯರ್ ವಾಸ. ಅವರ

ಪಂಡಿತೆ ವೀಣೆ ನುಡಿಸುತ್ತಾರೆ ಎಂದು ಮಾತ್ರ ಕೇಳಿದ್ದೆವು. ಒಂದೊಂದು ಸಲ ಆಕೆ ಮತ್ತು ಇನ್ನೂ ಒಂದಿಬ್ಬರು ಕಾಂಪೌಂಡಿನಲ್ಲಿ ಓಡಾಡುವುದನ್ನು ದೂರದಿಂದ ನೋಡುತ್ತಿದ್ದೆವು. ಹೀಗಿದ್ದಾಗ ಒಂದು ದಿನ ಹತ್ತಿರದಿಂದ ನೋಡುವ ಅವಕಾಶ ಒದಗಿತು. ಆ ಸಂಜೆ ನಾವು ಆಟವಾಡುತ್ತಿದ್ದಾಗ ಆ ಕಾಂಪೌಂಡಿನಲ್ಲಿ ಏನೋ ಕೋಲಾಹಲವಾಗುತ್ತಿತ್ತು. ಅದೇನೆಂದು ನೋಡಲು ಓಡಿದೆವು. ಗೇಟ್ ತೆಗೆದಿತ್ತು. ಮನೆಯ ಮೇಲೆ ಒಬ್ಬರು ಹತ್ತಿ ಕೋಲಿನಿಂದ ಒಳಗಡೆ ಏನನ್ನೋ ಚುಚ್ಚುತ್ತಿದ್ದರು. ಹೆಂಗಸರು ಒಂದು ಬೆಂಚು ಮೇಲೆ ನಿಂತು ಕಿಟಕಿಯಲ್ಲಿ ಏನನ್ನೋ ನೋಡುತ್ತಾ ಉದ್ವೇಗದಿಂದ ಮಾತನಾಡುತ್ತಿದ್ದರು. ಅನೇನೆಂದು ಕೇಳಿದಾಗ ಅಡಿಗೆ ಮನೆಯಲ್ಲಿ ಒಂದು ಹಾವು ಸೇರಿದೆ ಅದನ್ನು ಓಡಿಸುವ ಪ್ರಯತ್ನ ಎಂದು ತಿಳಿಯಲಾಯಿತು. ನಮಗೆ ಹಾವು ಕಾಣಿಸದು ನಮ್ಮಲ್ಲಿ ಇಬ್ಬರು ಮೂವರು ಹುಡುಗರು ''ವೀಣೇಲಿ ಮೋಡಿ (ಹಾವಿನ ಸ್ವರ) ಬಾರಿಸಿ ಹಾವು ಈಚೆಗೆ ಬರುತ್ತೆ'' ಎಂದು ನಗುತ್ತಾ ಹೇಳಿದರು. ಕೂಡಲೆ ಕೋಪಿಸಿಕೊಂಡು ಕೈಯಲ್ಲಿ ಹಿಡಿದ ದೊಣ್ಣೆಯನ್ನು ಬೀಸುತ್ತಾ ''ಪೋಕರಿಗಳಾ ನಿಮಗೆ ಶಾಸ್ತಿ ಮಾಡುತ್ತೇನೆ'' ಎಂದು ನೀಲಮ್ಮನರು ಮುಂದಕ್ಕೆ ನುಗ್ಗಿ ಬಂದರು. ನಾವು ಓಡಿ ಹೋದೆವು.

ಅವರ ವೀಣಾ ವಾದನವನ್ನು ನೇರವಾಗಿ ಕೇಳಿದುದು ಹಲವು ವರುಷಗಳ ನಂತರ, ಮೈಸೂರಿನಲ್ಲಿ ವಿದ್ಯಾರ್ಥಿಯಾಗಿದ್ದಾಗ. ಆ ವೇಳೆಗೆ ನೀಲಮ್ಮನವರು ಒಳ್ಳೆಯ ವೀಣಾ ವಾದಕಿ ಎಂದು ಪ್ರಸಿದ್ಧರಾಗಿದ್ದರು. ಸಾರ್ವಜನಿಕ ಸಮಾರಂಭದಲ್ಲಿ ಅವರ ವೀಣೆಯ ಕಚೇರಿಗಳು ನಡೆಯುತ್ತಿದ್ದುವು. ಆ ವೇಳೆಗಾಗಲೇ ಅವರು ರೇಡಿಯೋ ಕಾರ್ಯಕ್ರಮಗಳ ಮೂಲಕ ಇಡೀ ಕರ್ನಾಟಕ ಸಂಗೀತಕ್ಷೇತ್ರಕ್ಕೆ ಪರಿಚಿತರಾಗಿದ್ದರು. ಮೈಸೂರು ಅರಮನೆಯೇ ಅಲ್ಲದೆ ದಕ್ಷಿಣ ಭಾರತದ ಪ್ರಮುಖ ಸಾಂಸ್ಕೃತಿಕ ಕೇಂದ್ರಗಳಲ್ಲಿ ಎಲ್ಲಾ ವೀಣೆ ಕಚೇರಿ ಮಾಡಿದ್ದರು. ಮೈಸೂರಿನಲ್ಲಿಯೇ ಅವರ ಜನಪ್ರಿಯತೆ ಏನೂ ಕಡಿಮೆ ಇರಲಿಲ್ಲ. ಅವರ ಕಚೇರಿಗೆ ಕೋಲಾಹಲವಿಲ್ಲದಿದ್ದರೂ ಹಾಲ್ ಭರ್ತಿ. ಒಳ್ಳೆಯ ಎತ್ತರವಾದ ಸ್ಫುರದ್ರೂಪಿ ಹೆಂಗಸು, ವೀಣೆಯನ್ನು ಹಾಡಿಕೊಂಡು ನುಡಿಸುತ್ತಿದ್ದರು. ಕೋಮಲವಾದ ದನಿ, ವೀಣೆಯ ತಂತಿಯನಾದ ಮತ್ತು ನೀಲಮ್ಮನವರ ಕಂಠಧ್ವನಿ ಎರಡೂ ಹದವಾಗಿ ಬೆರೆತು ಒಂದೇ ಧಾರೆಯಂತಹ ಭ್ರಮೆ ಉಂಟುಮಾಡುತ್ತಿತ್ತು. ಶ್ರೋತೃಗಳಿಗೆ ಒಂದು ಅಪೂರ್ವ ಸುಖಾನುಭವವನ್ನು ಕೊಡುತ್ತಿತ್ತು. ಕಾರ್ಯಕ್ರಮದಲ್ಲಿ ಅಚ್ಚ ಕರ್ನಾಟಕ ಸಂಪ್ರದಾಯದ ರಾಗ ಹಾಗೂ ಕೃತಿಗಳು. ಆದರೆ ಕಡೆಯಲ್ಲಿ ಹಿಂದೂಸ್ತಾನಿ ಮಟ್ಟುಗಳು. ಸ್ವಲ್ಪ ಮಡಿವಂತರಿಗೆ ಅದು ಹಿಡಿಸದು. ಆದರೆ ಸಾಮಾನ್ಯ ರಸಿಕವರ್ಗಕ್ಕೆ ಆನಂದ ಕೊಡುವಂತಹದು.

ಮೈಸೂರು ಬಿಟ್ಟು ನಾನು ಬೆಂಗಳೂರಿನಲ್ಲಿ ನೆಲೆಸಿದ ನಂತರ, ನೀಲಮ್ಮನವರ ಸಂಗೀತ ಸಂಪರ್ಕ ತಪ್ಪಿಹೋಯಿತು. ಯಾವಾಗಲಾದರೂ ಒಂದೊಂದು ಸಲ ನೀಲಮ್ಮನವರ ಆಕಾಶವಾಣಿ ಕಾರ್ಯಕ್ರಮ ಪ್ರಸಾರವಾದಾಗ ಅವರ ಗಂಡ ಕೆ. ಕಡಾಂಬಿಯವರು ಆ ಕಾರ್ಯಕ್ರಮವನ್ನು ಕೇಳಿರಿ ಎಂದು ಪತ್ರ ಬರೆಯುತ್ತಿದ್ದರು. ಕೊನೆಗೆ ಅದೂ ತಪ್ಪಿಹೋಯಿತು. ಅವರಿಬ್ಬರಿಗೂ ಮಕ್ಕಳಿಲ್ಲ. ಇಬ್ಬರೂ ಮನಸ್ಸಿನಿಂದ ಮರೆಯಾದರು. 1988ರಲ್ಲಿ ಕರ್ನಾಟಕ ಗಾನಕಲಾ ಪರಿಷತ್ತಿನ 18ನೆಯ ಸಮ್ಮೇಳನಕ್ಕೆ ಅಧ್ಯಕ್ಷತೆಗೆ ನೀಲಮ್ಮ ಕಡಾಂಬಿಯವರನ್ನು ಆರಿಸಲಾಯಿತು. ಆದರೆ ಅವರೆಲ್ಲಿಹರೋ ಯಾರಿಗೂ ತಿಳಿಯದು. ಕೊನೆಗೆ ನಾನಾ ಕಡೆ ಹುಡುಕಾಡಿದಾಗ ಅವರು ಬೆಂಗಳೂರಿನಲ್ಲಿಯೇ ಪೋಲಿಸ್ ಕ್ವಾರ್ಟರ್ಸ್‌ನಲ್ಲಿ ಯಾರದೋ ಮನೆಯಲ್ಲಿರುವುದು ತಿಳಿಯಿತು. ಆವೇಳೆಗೆ ಅವರ ಪತಿ ನಿಧನರಾಗಿ ಬಹು ವರುಷಗಳಾಗಿದ್ದವು. ನೀಲಮ್ಮನವರನ್ನು ಸ್ವತಃ ಕಂಡು ಒಪ್ಪಿಗೆಯ ಪತ್ರವನ್ನೂ ಪಡೆದುದಾಯಿತು. ಸಮ್ಮೇಳನವನ್ನೂ ಗಂಭೀರವಾಗಿ ಗೌರವಯುತವಾಗಿ ನಡೆಸಿಕೊಂಡು ಹೋದರು - ನೀಲಮ್ಮ. ಅವರು ನಿಧನರಾದಾಗ ಪ್ರಕಟವಾದ ಲೇಖನಗಳಲ್ಲಿ ನೀಲಮ್ಮ ಕಡಾಂಬಿಯವರು ಕರ್ನಾಟಕ ಅಕಾಡೆಮಿಯ ಮೊದಲ ಮಹಿಳಾ ಅಧ್ಯಕ್ಷೆ ಎಂದು ಪ್ರಕಟವಾಗಿದೆ. ಅದು ತಪ್ಪು, ಅವರು ಕರ್ನಾಟಕ ಗಾನಕಲಾ ಪರಿಷತ್ತಿನ ಸಮ್ಮೇಳನಗಳ ಮೊದಲನೆಯ

ಮಹಿಳಾ ಅಧ್ಯಕ್ಷೆ ಎಂದಿರಬೇಕು. ಸಮ್ಮೇಳನದ ಅನಂತರ ಅವರಿಗೂ ಸಾರ್ವಜನಿಕ ಕ್ಷೇತ್ರಕ್ಕೂ ಪುನಃ ಸಂಬಂಧ ತಪ್ಪಿಹೋಯಿತು. ಅನಂತರ ಅವರಿಗೆ ಸ್ವಲ್ಪ ಬುದ್ಧಿಭ್ರಮಣೆಯೂ ಆಗಿದ್ದಂತೆ ಕಾಣಬರುತ್ತೆ. ನಿದರ್ಶನವಾಗಿ ಇದ್ದಕ್ಕಿಂದ್ದಂತೆ ಯಾರಾದರೂ ಗುರ್ತು ಕಂಡವರ ಮನೆಗೆ ಬಂದು ''ನಾನು ಆಟೋದಲ್ಲಿ ಬಂದೀದಿನಿ, ದುಡ್ಡಿಲ್ಲ. ಒಂದು 50ರೂ. ಕೊಡಿ. ಆಮೇಲೆ ಕೊಡುತ್ತೇನೆ'' ಎನ್ನುವರು. ಆ ಹಣವನ್ನು ತಿಂಗಳ ಗೌರವಧನ ಬಂದ ನಂತರ ಹಿಂತಿರುಗಿ ಕೊಡುತ್ತಿದ್ದರು. ಬರುಬರುತ್ತಾ ಅರಳುಮರಳು ಬಂದಾಗ ಯಾರ ಬಳಿಯೋ ತೆಗೆದುಕೊಂಡ ಹಣ. ಇನ್ನಾರಿಗೋ ಹಿಂತಿರುಗಿ ಕೊಡುವುದು ಹೀಗಾಗುತ್ತಿತ್ತು. ಕೊನೆಗೆ ಎಲ್ಲೂ ಕಾಣದಾದರೂ ಒಂದು ದಿನ ವೃತ್ತ ಪತ್ರಿಕೆಗಳಲ್ಲಿ ನೀಲಮ್ಮ ಕಡಾಂಬಿ ಮೈಸೂರು ಕೃಷ್ಣರಾಜೇಂದ್ರ ಆಸ್ಪತ್ರೆಯ ಬಳಿ ರಸ್ತೆ ಬದಿಯಲ್ಲಿ ಬಿದ್ದಿದ್ದರೆಂದೂ, ಅನಂತರ ಯಾರೋ ನೋಡಿದವರು ಕನಿಕರದಿಂದ ಆಸ್ಪತ್ರೆಯ ವಾರ್ಡ್‌ಗೆ ದಾಖಲು ಮಾಡಿದರೆಂಬುದನ್ನು ಓದಿ ಆಶ್ಚರ್ಯವಾಯಿತು. ಆಸ್ಪತ್ರೆಯಲ್ಲಿಯೂ ಅರಳು ಮರಳು ಜಾಸ್ತಿಯಾಗಿ ಎಲ್ಲರ ಹತ್ತಿರವೂ ಜಗಳ. ಈ ಸ್ಥಿತಿಯಲ್ಲಿಯೇ ನರಳಿ ಅಸುನೀಗಿದರು. ಅವರನ್ನು ವೈಭವಕಾಲದಲ್ಲಿ ನೋಡಿದ್ದವರಿಗೆ ಈ ಸಾವಿನ ದಾರುಣತೆ ಬಹುವ್ಯಸನ ಉಂಟುಮಾಡಿತು. ಒಂದಾನೊಂದು ಕಾಲದಲ್ಲಿ ಸಂಗೀತ ಕ್ಷೇತ್ರದ ಉನ್ನತ ಮಟ್ಟದಲ್ಲಿ ಮೆರೆದರೂ ಕೊನೆಗೆ ಯಾರು ಎಂದು ಕೇಳುವವರು ಇಲ್ಲದೆ ಒಂದು ರೀತಿ ಅನಾಥವಾಗಿ ಸಾವನ್ನಪ್ಪಿದುದು ಬಹು ವಿಷಾದದ ಸಂಗತಿಯೇ. ಅನೇಕ ಕಲಾವಿದರ ಜೀವನ ಈ ರೀತಿಯೇ ಕೊನೆಗೊಂಡಿದೆ. ■

---

## ನನ್ನ ಜೀವನ ಗೆಳೆಯ, ಸಾಧು, ದೊರೆಸ್ವಾಮಿ ಅಯ್ಯಂಗಾರ್

**ಕ್ಯಾಪ್ಟನ್ ಡಾ॥ ಆರ್. ರಂಗಾಚಾರ್**

ದೊರೆಸ್ವಾಮಿ ಅಯ್ಯಂಗಾರ್ಯರ ಆಕಸ್ಮಿಕ ಅನಾರೋಗ್ಯ ಮತ್ತು ಅಕಾಲ ಮರಣದ ಬಗ್ಗೆ ನನ್ನ ಅನಿಸಿಕೆಯನ್ನು ಹೇಳದಿದ್ದರೆ ನನ್ನ ಮನಸ್ಸಿಗೆ ನೆಮ್ಮದಿ ಇಲ್ಲ. ಇದು ನನ್ನ ವೈಯಕ್ತಿಕ ಅಭಿಪ್ರಾಯ.

ನಾನು ಮತ್ತು ದೊರೆಸ್ವಾಮಿಯವರು ಇಬ್ಬರೂ ಮೈಸೂರಿನವರು, ಅಲ್ಲಿಂದಲೂ ಪರಿಚಯ. ಅವರು ಬೆಂಗಳೂರು ಆಕಾಶವಾಣಿಗೆ ಬಂದು ಸೇರಿದ ಮೇಲೆ ನಮ್ಮ ಸ್ನೇಹ ನಿಕಟಗೊಂಡಿತು. ಸಂಕೋಚ ಹಾಗೂ ದಾಕ್ಷಿಣ್ಯ ಸ್ವಭಾವದ ದೊರೆಸ್ವಾಮಿಯವರು ಆಕಾಶವಾಣಿಯಲ್ಲಿ ಕೆಲಸ ಮುಗಿಸಿ ಮನೆಗೆ ಬರುವಾಗ ನಡೆದೇ ಬರುತಿದ್ದರು. ನನ್ನ Clinicನಲ್ಲಿ ಕೆಲಸ ಮುಗಿಸಿ ಬರುವಾಗ Car ನಿಲ್ಲಿಸಿ, ಕುಳಿತುಕೊಳ್ಳಿ ಮನೆಯ ಹತ್ತಿರ ಬಿಡುತ್ತೇನೆ ಅಂದರೆ, ಇಲ್ಲ ನಡದೇ ಹೋಗುತ್ತೇನೆ ಎನ್ನುವರು. ಬಲವಂತ ಮಾಡಿ ಮನೆಯ ಹತ್ತಿರ ಬಿಡುತ್ತಿದ್ದೆ ಇಷ್ಟಕ್ಕೇ ಧನ್ಯವಾದಗಳು ಅನ್ನುತ್ತಿದ್ದರು. ಸಂಗೀತ ನೃತ್ಯ ಅಕಾಡೆಮಿಯ ಅಧ್ಯಕ್ಷರಾಗಿದ್ದಾಗ, ದೊರೆಸ್ವಾಮಿ ಅಯ್ಯಂಗಾರರ ಮೃದು ಸ್ವಭಾವವನ್ನು ದುರುಪಯೋಗಪಡಿಸಿಕೊಂಡ ಒಬ್ಬ ಸದಸ್ಯರು ಅವರ ಹತ್ತಿರ ವಾಗ್ವಾದ ಮಾಡಿದರು. ಅದರಿಂದ ಅವರ ಮನಸ್ಸು ಮತ್ತು ಆರೋಗ್ಯ ಸ್ವಲ್ಪ ವ್ಯತ್ಯಾಸಗೊಂಡು, ಬಿ.ಪಿ. ಸ್ವಲ್ಪ ಜಾಸ್ತಿಯಾಯ್ತು. ಚಿಕಿತ್ಸೆಗೆ ಬರುವುದಿರಲಿ, ಆ ಕುರಿತು ನನಗೆ ಒಂದು ದೂರವಾಣಿ ಕರೆ ಮಾಡಲೂ ಹಿಂದೆಗೆಯುತ್ತಿದ್ದರು.

ಜೀವನದಲ್ಲಿ ಮರಣವು Cricket Matchನ ಆಟದ ಹಾಗೆ. ನಾವೆಲ್ಲ ಆಟಗಾರರು. ನಮ್ಮ ಅಂತ್ಯ Bowl ಆಗಿ, stump ಆಗಿ, catch ಕೊಟ್ಟು LBW ಆಗಿ ಅಥವಾ Run Out ಆಗಿ ಮುಗಿಯುವುದು. ಅಂದರೆ ಇನ್ನೂ ಕೆಲಕಾಲ ಉಳಿಯಬಹುದು. ದೊರೆಸ್ವಾಮಿ ಅಯ್ಯಂಗಾರ್‌ರಿಗೆ ಮೇಲಿರುವ "Third Umpire" Not Out ಅನ್ನಲಿಲ್ಲ.

ದೇವರು ಅವರ ನಿದ್ರೆಯಲ್ಲಿ ಅವರಿಗೆ ಹೇಳಿದನಂತೆ ''ದೊರೆಸ್ವಾಮಿ ! ನೀನು ಈ ಸ್ವಾರ್ಥ, ಅಸೂಯೆ ಪಡುವ ಭ್ರಷ್ಟಾಚಾರ, ದ್ವೇಷಗಳು ದಿನೇ ದಿನೇ ಹೆಚ್ಚುತ್ತಿರುವ ಭೂಮಿಯ ಮೇಲೆ ನೋವು, ಸಂಕಟ ಪಟ್ಟು ಅಶಾಂತವಾಗಿ ಇರುವುದು ಸಾಕು. ನೀನು ಸದ್ಗುಣಿ, ಸ್ಥಿತಪ್ರಜ್ಞ, ಕುಲೀನ ಗೃಹಸ್ಥ. ಈ ನರಕದಿಂದ ನಿನ್ನನ್ನು ಬಿಡುಗಡೆ ಮಾಡುತ್ತೇನೆ. ನಿನಗಾಗಿ ನನ್ನ ಸ್ವರ್ಗದ ಬಾಗಿಲು ತೆರೆದಿದೆ. ಬಾ ದೊರೆಸ್ವಾಮಿ. ನಿನ್ನ ಭಕ್ತಿ ಪೂರ್ವ ಸಂಗೀತವನ್ನು ನಿನ್ನ ವೀಣೆಯ ಮುಕಾಂತರ ನುಡಿಸು. ನನಗೆ ಆನಂದವಾಗುತ್ತದೆ ಮತ್ತು ನಿನ್ನ ಆತ್ಮಕ್ಕೆ ಶಾಂತಿ ದೊರೆಯುತ್ತದೆ. ಬಾ ! ದೊರೆಸ್ವಾಮಿ, ಬಾ !!

# ಕೃತಿ ನಿರೂಪಣಾ ಕ್ರಮ
## (ಗೀತಶಾಸ್ತ್ರ ಚಿಂತನ ಮಾಲಿಕೆಯಲ್ಲಿ ಎರಡನೇ ಕಾರ್ಯಕ್ರಮ)

**ಆರ್.ಕೆ. ಪದ್ಮನಾಭ**

ಅನನ್ಯ ಸಂಗೀತ ಸಂಸ್ಥೆಯ ಆಶ್ರಯದಲ್ಲಿ ನಡೆಯುತ್ತಿರುವ ಚಿಂತನಾ ಸರಣಿಯಲ್ಲಿ ಎರಡನೆಯ ಕಾರ್ಯಕ್ರಮದಲ್ಲಿ, ವಿದ್ವಾನ್ ಆರ್.ಕೆ. ಶ್ರೀಕಂಠನ್ ಅವರು ನಡೆಸಿಕೊಟ್ಟ ''ಕೃತಿ ನಿರೂಪಣಾ ಕ್ರಮ'' ಕಾರ್ಯಕ್ರಮ ವಿದ್ಯಾರ್ಥಿಗಳಿಗೆ ಹಾಗೂ ವಿದ್ವಾಂಸರಿಗೂ ದಾರಿ ದೀವಟಿಗೆಯಾಗಿತ್ತು.

ಕೃತಿಯ ರಚನಾಕ್ರಮದ ವೈಶಿಷ್ಟ್ಯವನ್ನು ವಿವರಿಸುತ್ತಾ, ಪಲ್ಲವಿಯ ಹೇಳಿಕೆಯಲ್ಲಿನ ಪ್ರಶ್ನೆಗೆ ಅನುಪಲ್ಲವಿ ಉತ್ತರಿಸಿದರೆ, ಚರಣ ಅದನ್ನೂ ಧೃಡೀಕರಿಸುತ್ತದೆ. (ಕೇಳನೊ ಹರಿ ತಾಳನೊ ಎಂಬ ಪಲ್ಲವಿಯ ಸಾಹಿತ್ಯಕ್ಕೆ ''ಏನನ್ನು'' ಎಂದು ಪ್ರಶ್ನಿಸಿದಾಗ, ಅದಕ್ಕೆ ಅನುಪಲ್ಲವಿಯ ಉತ್ತರ ''ತಾಳ ಮೇಳಗಳಿದ್ದು ಪ್ರೇಮವಿಲ್ಲದ ಗಾನ''). ಹೀಗೆ ಕೃತಿಯಾಗಲೀ, ಕೀರ್ತನೆಯಾಗಲಿ, ಪಲ್ಲವಿ, ಅನುಪಲ್ಲವಿ, ಚರಣಗಳ ರಚನಾಕ್ರಮ ಒಂದೆ ಎಂದು ಸ್ಪಷ್ಟೀಕರಿಸಿ ಮುಂದೆ ಕೃತಿಯ ಮಾತು-ಧಾತುವಿನ ಸ್ಥಾನವನ್ನು ವಿಶ್ಲೇಷಿಸಿದ್ದು, ಶ್ರೋತೃಗಳ ಹಾಗೂ ವಿದ್ಯಾರ್ಥಿಗಳ ಅನೇಕ ರೀತಿಯ ಸಂದೇಹಗಳಿಗೆ ಉತ್ತರ ನೀಡಿತು. ಕೃತಿಗಳಲ್ಲಿ ಮಾತಿಗೆ ಪ್ರಾಶಸ್ತ್ಯವೋ ಅಥವಾ ಧಾತುವಿಗೆ ಪ್ರಾಶಸ್ತ್ಯವೋ ಎಂಬ ಜಿಜ್ಞಾಸೆ ಇದ್ದೇ ಇದೆ. ಇದರ ಬಗ್ಗೆ ತಮ್ಮ ಚಿಂತನೆಯನ್ನು ಹರಿಸಿದ ಆರ್.ಕೆ.ಎಸ್. ಕೃತಿಗಳಲ್ಲಿ ಧಾತುವಿಗೇ ಪ್ರಾಶಸ್ತ್ಯ. ಮಾತು ಎರಡನೆಯ ಸ್ಥಾನದಲ್ಲೇ ಇರುತ್ತದೆ. ಹಾಗೆಂದು ಸಾಹಿತ್ಯವನ್ನು ಇಚ್ಛೆ ಬಂದ ಹಾಗೆ ಹಾಡುವುದಲ್ಲ. ಸಾಹಿತ್ಯ ಶುದ್ಧತೆಯನ್ನೂ ಸಹ ಕಾಪಾಡಿಕೊಂಡು ಬರಬೇಕು ಎಂದು ಹೇಳಿ ''ಚಕ್ಕನಿರಾಜ - ಮಾರ್ಗಮು ಯುಂಡಗ) ಎಂಬ ತ್ಯಾಗರಾಜ ಸ್ವಾಮಿಗಳ ಕೃತಿಯನ್ನು ಹಾಡಿ ತೋರಿಸಿ ಇಲ್ಲಿ ಪೂರ್ವಾಂಗದಲ್ಲಿ ಚಕ್ಕನಿ ರಾಜ ಉತ್ತರಾಂಗದಲ್ಲಿ ಮಾರ್ಗಮುಯುಂಡಗ. 'ರಾಜಮಾರ್ಗಮು'' ಎಂಬ ಒಂದು ಪದವನ್ನು ರಾಜ-ಮಾರ್ಗಮು ಎಂದು ಪದಚ್ಛೇದ ಮಾಡಿದಾಗಲೇ ಅಲ್ಲಿ ಸಂಗೀತದ ಸೊಗಸಿಗೆ ಸಾಧ್ಯತೆ ಇರುವುದು. ಹೀಗೆ ಕೃತಿಗಳಲ್ಲಿ ಧಾತುವಿನ ಪ್ರಾಧಾನ್ಯತೆಯನ್ನು ಬಹಳ ವಿಶದವಾಗಿ ತಿಳಿಸಿಕೊಟ್ಟಿದ್ದು, ಅವರ ಅಪೂರ್ವ ಜ್ಞಾನದ ಪ್ರತೀಕವಾಗಿತ್ತು.

ಕೃತಿಗಳು ರಾಗ ಸಂಚಾರದ, ರಾಗ ಸೌಂದರ್ಯದ ಕೈಪಿಡಿ ರಾಗ ಸೌಂದರ್ಯ ವರ್ಧನೆಗೆ ಸಂಗತಿಗಳ ಪಾತ್ರವನ್ನು ವಿಶ್ಲೇಷಿಸುತ್ತ, ಸಂಗತಿ ಚಿತ್ರವಿಚಿತ್ರವಾದ ರಾಗ ಪ್ರಯೋಗಗಳ ಹೆಣಿಕೆಯಾಗಿದ್ದು ಕೃತಿಯ ಗಾಂಭೀರ್ಯವನ್ನು ವರ್ಧಿಸುತ್ತದೆ ಎಂಬುದನ್ನು ಧೃಡೀಕರಿಸಲು ತ್ಯಾಗರಾಜ ಸ್ವಾಮಿಗಳ ಶುದ್ಧ ಸಾವೇರಿ ರಾಗದ ''ದಾರಿನೀ ತೆಲಿಸಿಕುಂಟೇ'' ಕೃತಿಯನ್ನು ಹಾಡಿ ಪಲ್ಲವಿಯಲ್ಲೇ 6-7 ಸಂಗತಿಗಳ ಗೊಂಚಲುಗಳ ಗಾನಮಾಲೆಯನ್ನೇ ಸೃಷ್ಟಿಸಿದ್ದು ಅವರ ಸಾಧನೆ. ಈ ವಯಸ್ಸಿನಲ್ಲೂ ಅವರ ಶಾರೀರ ದಾರ್ಢ್ಯತೆ, ಮನೋಧರ್ಮ, ಸಾಹಿತ್ಯ ಹಾಗೂ ರಾಗವರ್ಧನೆಗೆ ಅವರ ಶಾರೀರದ ಏರಿಳಿತದ ಕ್ರಮ ಇಂದಿನ ಪೀಳಿಗೆಗೆ ಮಾದರಿಯಾಗಿತ್ತು. ಕೃತಿಯ ಸಾಹಿತ್ಯದ ಸಂಪೂರ್ಣ ಭಾವ ಹಾಗೂ ರಾಗ ಸಂಚಾರಗಳ ಪರಿಪೂರ್ಣ ತಿಳುವಳಿಕೆ ಇಲ್ಲದೆ ನಮ್ಮದೇ ಆದ ಸಂಗತಿಗಳನ್ನು ಸೇರಿಸಿ, ಕೃತಿಯ ಮೂಲಸ್ವರೂಪಕ್ಕೆ ಧಕ್ಕೆ ತರುವಂತಹ ಆಭಾಸವನ್ನು ಮಾಡಕೂಡದು ಎಂದು ಎಚ್ಚರಿಸಿ, ಒಂದೊಂದು ಕೃತಿಗೆ ಒದೊಂದು ಕಾಲಪ್ರಮಾಣವಿರುತ್ತದೆ, ಹಾಗೆ ಹಾಡಿದಾಗ ಮಾತ್ರ ಆ ಕೃತಿ ಅಂತರಂಗವನ್ನು ಮುಟ್ಟುವುದು ಎಂದು ಹೇಳಿ ಅಸಾವೇರಿ ರಾಗದ ''ರಂ ಮಾ ಇಂಟಿದಾಕ'' ಮತ್ತು ಕಾಪಿ ರಾಗದ 'ಇಂತ ಸೌಖ್ಯ'' ಕೃತಿಗಳನ್ನು ಸೌಖ್ಯವಾಗಿ ಹಾಡಿ ರಸಿಕರ ಪ್ರಶಂಸೆಗೆ ಪಾತ್ರರಾದರು. ಒಟ್ಟಾರೆ ಅಂದಿನ ಕಾರ್ಯಕ್ರಮ ಬಹಳ ಬೋಧಪ್ರದವೂ, ರಂಜನಾತ್ಮಕವೂ ಆಗಿದ್ದು ನೂರಾರು ರಸಿಕರು ಪ್ರಯೋಜನವನ್ನು ಪಡೆದರು.

# ಅನನ್ಯ ಕ್ಯಾಲೆಂಡರ್-1999 ಅನಾವರಣ

ಶ್ರೀ ಸಂತೋಷ್‌ಕುಮಾರ್ ಗುಲ್ವಾಡಿಯವರಿಂದ, ಭಾರತೀಯ ವಿದ್ಯಾಭವನ, ಬೆಂಗಳೂರು



ಶ್ರೀ ಗಿರಿಮಾಜಿಯವರಿಂದ, ಶಿವಮೊಗ್ಗ.



ಅನನ್ಯ

ಅನನ್ಯ
91/2, 4ನೇ ಮುಖ್ಯರಸ್ತೆ,
ಮಲ್ಲೇಶ್ವರ, ಬೆಂಗಳೂರು-560 003.

# ANANYA PROGRAMMES FOR MARCH-1999

Saturday, 13th March 1999 at 5.45 p.m.

## VOCAL RECITAL

**Vidushi Rajalakshmi Krishnaswamy**

accompanied by

**Vidwan C. Madhusudan** - Violin
**Vidwan R. Ramesh** - Mridanga

---

Sunday, 13th March, 1999 at 6.30 p.m.

## VOCAL RECITAL

by **Vidwan S. Shridhar**

accompanied by

**Vidwan J.K. Sridhar** - Violin
**Vidwan M.A. Krishnamurthy** - Mridanga
**Vidwan Shrishaila** - Ghata

Saturday, 27th March 1999 at 6.30p.m.

## HINDUSTANI VOCAL RECITAL

**Smt. Lavanya Dinesh**

accompanied by

**Sri Nagesh** - Tabla
**Sri C.G. Anantha Swamy** - Harmonium

***at ANANYA SABHANGANA, 4th Main, Malleswaram***
***All are Welcome***

***Please park your vehicle outside the gate.***

Published by : ANANYA, GML CULTURAL ACADEMY, 91/2, 4th Main, Malleswaram, Bangalore-560 003. Phone : 3345069. Printed by : Akshara Printers, Basavanagudi, Bangalore-560 004. Phone : 624082, 624897.